# ಹಂಪಿ ಸ್ಮಾರಕಶಿಲ್ಪ ಹಾಗೂ ಚಿತ್ರಗಳಲ್ಲಿ ಸಾಮಾಜಿಕ ಜೀವನ

(ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್(ಸಮಾಜಶಾಸ್ತ್ರ) ಪದವಿಗಾಗಿ ಸಲ್ಲಿಸಿದ ಸಂಪ್ರಬಂಧ)


ಸಂಶೋಧಕರು

ನೀಲಪ್ಪ ಎಸ್.

ನೋ.ಸಂ.೧೫೦೧೧೨೦೬೦೦೨೫

ಮಾರ್ಗದರ್ಶಕರು

ಡಾ. ಚಲುವರಾಜು

ಪ್ರಾಧ್ಯಾಪಕರು

ಬುಡಕಟ್ಟು ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ





ಬುಡಕಟ್ಟು ಅಧ್ಯಯನ ವಿಭಾಗ

ಸಮಾಜವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ-೫೮೩೨೭೬

೨೦೧೬




# ಹಂಪಿ ಸ್ಮಾರಕಶಿಲ್ಪ ಹಾಗೂ ಚಿತ್ರಗಳಲ್ಲಿ ಸಾಮಾಜಿಕ ಜೀವನ

(ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್(ಸಮಾಜಶಾಸ್ತ್ರ) ಪದವಿಗಾಗಿ ಸಲ್ಲಿಸಿದ ಸಂಪ್ರಬಂಧ)



ಸಂಶೋಧಕರು
**ನೀಲಪ್ಪ ಎಸ್.**

ಮಾರ್ಗದರ್ಶಕರು
**ಡಾ. ಚಲುವರಾಜು**
ಪ್ರಾಧ್ಯಾಪಕರು
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ



**ಬುಡಕಟ್ಟು ಅಧ್ಯಯನ ವಿಭಾಗ**
**ಸಮಾಜ ವಿಜ್ಞಾನಗಳ ನಿಕಾಯ**
**ಕನ್ನಡ ವಿಶ್ವವಿದ್ಯಾಲಯ, ಹಂಪಿ**
**ವಿದ್ಯಾರಣ್ಯ ೫೮೩೨೭೬**

೨೦೧೫-೧೬

# ಮಾರ್ಗದರ್ಶಕರ ದೃಢೀಕರಣ ಪತ್ರ

**ಹಂಪಿ ಸ್ಮಾರಕಶಿಲ್ಪ ಹಾಗೂ ಚಿತ್ರಗಳಲ್ಲಿ ಸಾಮಾಜಿಕ ಜೀವನ** ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು **ನೀಲಪ್ಪ ಎಸ್.** ಅವರು ನನ್ನ ಮಾರ್ಗದರ್ಶನದಲ್ಲಿ ಎಂ.ಫಿಲ್. ಪದವಿಗಾಗಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ಸಂಪ್ರಬಂಧವು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಮಾರ್ಗದರ್ಶಕರು

ದಿನಾಂಕ:

ಸ್ಥಳ: ವಿದ್ಯಾರಣ್ಯ

**ಡಾ. ಚಲುವರಾಜು**
ಪ್ರಾಧ್ಯಾಪಕರು
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

## ಘೋಷಣಾ ಪತ್ರ

**ಹಂಪಿ ಸ್ಮಾರಕಶಿಲ್ಪ ಹಾಗೂ ಚಿತ್ರಗಳಲ್ಲಿ ಸಾಮಾಜಿಕ ಜೀವನ** ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು **ಡಾ. ಚಲುವರಾಜು** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಕನ್ನಡ ವಿಶ್ವವಿದ್ಯಾಲಯ, ಹಂಪಿ ಸಮಾಜ ವಿಜ್ಞಾನಗಳ ನಿಕಾಯದ **ಬುಡಕಟ್ಟು ಅಧ್ಯಯನ ವಿಭಾಗಕ್ಕೆ** ಎಂ.ಫಿಲ್. ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ಸಂಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ದಿನಾಂಕ:

ಸ್ಥಳ: ವಿದ್ಯಾರಣ್ಯ

(ನೀಲಪ್ಪ ಎಸ್.)
ಸಂಶೋಧನ ವಿದ್ಯಾರ್ಥಿ
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

# ಪರಿವಿಡಿ

ಅಧ್ಯಾಯ : ಒಂದು

# ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ಮಹತ್ವ

ಪ್ರಸ್ತಾವನೆ

೧.೧. ಅಧ್ಯಯನದ ಉದ್ದೇಶ

೧.೨. ಅಧ್ಯಯನದ ವ್ಯಾಪ್ತಿ

೧.೩. ಅಧ್ಯಯನದ ಸ್ವರೂಪ

೧.೪. ಅಧ್ಯಯನದ ಮಹತ್ವ

೧.೫. ಅಧ್ಯಯನದ ಸಮೀಕ್ಷೆ

೧.೬. ಅಧ್ಯಯನದ ವಿಧಾನಗಳು

# ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ಮಹತ್ವ

## ಪ್ರಸ್ತಾವನೆ

ಭಾರತೀಯ ಇತಿಹಾಸದಲ್ಲಿ ವಿಶ್ವವಿಖ್ಯಾತಿ ಪಡೆದ ಹಂಪಿಯು ಪ್ರಾಚೀನ ಕಾಲದಿಂದಲೂ ಆದಿಮಾನವರ ನೆಲೆಗಳನ್ನು ಹೊಂದಿದ ಪ್ರದೇಶವಾಗಿದೆ. ಚಾರಿತ್ರಿಕ ಕಾಲದಿಂದಲೂ ಸಾಮಾಜಿಕ ಬದುಕನ್ನು ಸೂಚಿಸುವ ಚಿತ್ರಗಳನ್ನು ಇಲ್ಲಿ ಕಾಣುತ್ತೇವೆ. ಪುರಾತನ ಸಂಸ್ಕೃತಿಯನ್ನು ಹೊಂದಿರುವ ಹಂಪಿಯು ಒಂದು ಚಾರಿತ್ರಿಕ ಸಾಂಸ್ಕೃತಿಕ ಕೇಂದ್ರವಾಗಿದೆ. ಇಲ್ಲಿನ ಫಲವತ್ತಾದ ಭೂಮಿ ಹಾಗೂ ನದಿಯ ತೀರಗಳಲ್ಲಿ, ನೀರು ನಿಸರ್ಗ ಸಂಪತ್ತು, ಸಂಪನ್ಮೂಲಗಳು ಮನುಕುಲದ ನೆಲೆಗಳ ನಿರ್ಮಾಣಕ್ಕೆ ಸಹಾಯಕವಾಗಿವೆ. "ಹಂಪಿಯ ಬಗೆಗಿನ ಶಾಸನಗಳು, ಸಾಹಿತ್ಯ ಕೃತಿಗಳು, ನಾಣ್ಯಗಳು, ಜನಪದ ಮೌಖಿಕ ಇತಿಹಾಸ, ಹೀಗೆ ಅನೇಕ ಅಂಶಗಳ ಮೂಲಕ ನಾವು ಅಧ್ಯಯನ ಮಾಡಿ, ಆಯಾ ಸಮುದಾಯದ ಜನ ಜೀವನದ ಸ್ಥಿತಿಗತಿಗಳನ್ನು ಇಲ್ಲಿನ ಸ್ಮಾರಕಶಿಲ್ಪಗಳಲ್ಲಿ ಹಾಗೂ ಚಿತ್ರಗಳಲ್ಲಿ ಕಾಣಲು ಸಾಧ್ಯವಿದೆ."[1] ಸಾಂಸ್ಕೃತಿಕ ಚಟುವಟಿಕೆಗಳ ಹಿನ್ನೆಲೆಯ ಮುಖಾಂತರ ಪ್ರಸ್ತುತ ಸಮುದಾಯಗಳನ್ನು ಕುರಿತಂತೆ ಅಧ್ಯಯನಗಳು ನಡೆದಿವೆ ಹಾಗೂ ನಡೆಯುತ್ತಿವೆ. ಇಲ್ಲಿ ಹಂಪಿ ಪರಿಸರದ ಸಾಮಾಜಿಕ ಚಿತ್ರಗಳ ವಿಷಯದ ಅಧ್ಯಯವನ್ನು ಕೈಗೊಳ್ಳಲಾಗಿದೆ. ಈ ಅಧ್ಯಯನ ಕೂಡ ಸಮುದಾಯಗಳನ್ನು ಅವಲಂಬಿತ ಶಿಸ್ತುಗಳಲ್ಲಿ ಇದೂ ಕೂಡ ಒಂದಾಗಿದೆ. ಹಂಪಿಯ ತುಂಗಭದ್ರ ನದಿ ಕಣಿವೆಯ ಪ್ರದೇಶದಲ್ಲಿ ವಿಜಯನಗರ ಪೂರ್ವದ ಆದಿಮ ಸಂಸ್ಕೃತಿಯಲ್ಲಿ ಅನೇಕ ಸಾಮಾಜಿಕ ಹಾಗೂ ಸಾಂಸ್ಕೃತಿಕ ಅಂಶಗಳು ಕಂಡುಬರುತ್ತವೆ. ಆದಿಮಾನವನ ಸಮಾಜದ ಹಲವಾರು ವಿಷಯಗಳನ್ನು ಅರ್ಥೈಸುವಂತಹ ಗವಿಯ ವರ್ಣಚಿತ್ರ, ಯುದ್ಧಚಿತ್ರ, ಕೃಷಿ, ಪಶುಪಾಲನೆ, ಬೇಟೆ, ಪರಿಸರ ಸಸ್ಯ, ಗಾರೆಯ ಶಿಲ್ಪ, ಸಂಗೀತ ವಾದ್ಯಗಳ ಚಿತ್ರಗಳು ಇನ್ನೂ ಅನೇಕ ಚಿತ್ರಗಳು ಜನಸಾಮಾನ್ಯರ ಸಾಮಾಜಿಕ ಹಾಗೂ ಸಾಂಸ್ಕೃತಿಕ ಬದುಕನ್ನು ಬಿಂಬಿಸುವ ಅಂಶಗಳನ್ನು ಹೊಂದಿವೆ. ಇಲ್ಲಿನ ಮಿಥುನ ಚಿತ್ರಗಳು, ಪೌರಾಣಿಕ ಚಿತ್ರಗಳು ಕೂಡ ಸಮಾಜವನ್ನು ಅರ್ಥೈಸಲು ಉಪಯುಕ್ತವಾಗುವ ಚಿತ್ರಗಳಾಗಿವೆ.

ಹಂಪಿ ಪರಿಸರವು ಮಾನವನ ಸಮಗ್ರ ಸಾಂಸ್ಕೃತಿಕ ಬದುಕು, ಕಲೆ, ವಾಸ್ತುಶಿಲ್ಪಗಳು ಹಾಗೂ ಸಾಮಾಜಿಕ ಜೀವನವನ್ನು ಕಟ್ಟಿಕೊಡುವಂತಹ ಪ್ರದೇಶವಾಗಿದೆ. ಜಾಗತೀಕರಣದ ಇತಿಹಾಸ ಸಂದರ್ಭದಲ್ಲಿ

ವಿಶ್ವ ಪರಂಪರೆಯ ಪಟ್ಟಿಯಲ್ಲಿ ಸೇರಿರುವ ಹಂಪೆಯು ತನ್ನದೇ ಆದ ವೈಶಿಷ್ಟ್ಯ ಪೂರ್ಣವಾದ ಸಾಂಸ್ಕೃತಿಕ ಚರಿತ್ರೆಯನ್ನು ಹೊಂದಿದೆ. ಜನಸಾಮಾನ್ಯರ ಕಲೆ, ಸಾಹಿತ್ಯ, ಸಂಸ್ಕೃತಿ, ಪುರಾಣಗಳ ಹಿನ್ನೆಲೆಯಲ್ಲಿ ಸಮುದಾಯಗಳನ್ನು ಅರ್ಥ ಮಾಡಿಕೊಂಡು ಹಂಪಿಯ ಪರಿಸರದ ಸ್ಮಾರಕ ಚಿತ್ರಗಳು, ಇವುಗಳಲ್ಲಿ ರಾಜರ ಯುದ್ಧ, ಹೋರಾಟ, ವಿಜಯ, ಸೋಲು, ಗೆಲುವು ಸಾಮ್ರಾಜ್ಯದ ವಿಸ್ತರಣೆ, ಧನಸಂಪತ್ತು, ಸೈನ್ಯ ಹಲವಾರು ಮಹತ್ವದ ವಿಚಾರಗಳನ್ನು ಪ್ರತಿಬಿಂಬಿಸುತ್ತವೆ. ಹಾಗೆಯೇ ವಿಜಯನಗರ ಸಾಮ್ರಾಜ್ಯವು ಕಾಲಾನುಕ್ರಮಣೆಯಿಂದ, ಕೃಷಿ, ಪಶುಪಾಲನೆಯ ಸಮುದಾಯಗಳನ್ನು ಹೊಂದಿದೆ. ಹಂಪಿಯ ಸುತ್ತಮುತ್ತಲಿನ ಪರಿಸರದ ಅನೇಕ ಸಾಮಾಜಿಕ ಬುಡಕಟ್ಟುಗಳ ಭಿತ್ತಿಚಿತ್ರ, ಮಹಾಕಾವ್ಯಗಳ ಚಿತ್ರ, ಚಾರಿತ್ರಿಕ ದಾಖಲಾತಿಗಳು ಚರಿತ್ರೆಯ ಅಧ್ಯಯನಕಾರರಲ್ಲಿ ಕಾಣುತ್ತೇವೆ. ಈ ಹಿನ್ನೆಲೆಯಲ್ಲಿ ಹಂಪಿ ಪರಿಸರದ ಶಿಲ್ಪಸ್ಮಾರಕಗಳಲ್ಲಿ, ಉಬ್ಬುಶಿಲ್ಪಗಳಲ್ಲಿ, ಗಾರೆಶಿಲ್ಪಗಳಲ್ಲಿ ವ್ಯಕ್ತವಾಗುವ ಜನಸಾಮಾನ್ಯರ ಬದುಕಿನ ಹಲವು ವಿಚಾರಗಳನ್ನು ಇಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ.

ಹಂಪಿಯ ಪರಿಸರದ ಹಲವು ದೇವಾಲಯಗಳು ಧಾರ್ಮಿಕತೆಯ ಆಚರಣೆಗೆ ಸಂಬಂಧಿಸಿದ ಮಹತ್ವದ ವಿಷಯಗಳನ್ನು ಪ್ರತಿಬಿಂಬಿಸುತ್ತವೆ. ಹಂಪಿ ಪರಿಸರದಲ್ಲಿ ಭಿತ್ತಿಚಿತ್ರಗಳು, ರೇಖಾವಿನ್ಯಾಸ, ತಾಳಗರಿ ಚಿತ್ರ, ಹಸ್ತಪ್ರತಿ ಚಿತ್ರಗಳನ್ನು ಕಾಣಬಹುದಾಗಿದೆ. ತೀಪಾಷ್ ಮತ್ತು ತಾಡಪತ್ರಗಳ ಸ್ಥಳಗಳಲ್ಲಿ ಸಾಮಾಜಿಕ ಚಿತ್ರಗಳು ಅತ್ಯಂತ ಮುಖ್ಯ ಪಾತ್ರ ವಹಿಸುತ್ತವೆ. ಅನೇಕ ರೇಖಾಚಿತ್ರಗಳು ವಿವಿಧ ಭಂಗಿಗಳೊಡನೆ ವಿವಿಧ ರೀತಿಯ ರೂಪ, ಭಾವ ಅಲಂಕಾರಗಳಲ್ಲಿನ ಜೀವಂತಿಕೆ ಆ ಕೃತಿಗಳನ್ನು ಆಕರ್ಷಕವಾದ ಚಿತ್ರಗಳನ್ನಾಗಿ ಮಾಡಿವೆ. ಈ ಪದ್ಧತಿಯು ಪ್ರಾಚೀನ ಕಾಲದಿಂದಲೂ ರೂಢಿಯಲ್ಲಿದೆ. ಹಂಪಿಯ ವಿರೂಪಾಕ್ಷ ದೇವಾಲಯವು ಭಿತ್ತಿಚಿತ್ರಗಳಿಂದ ಅಲಂಕಾರಗೊಂಡಿರುವುದು ಕಂಡುಬರುತ್ತದೆ.

ಹಂಪಿ ಸ್ಮಾರಕಗಳ ಶಿಲ್ಪ ಮತ್ತು ಚಿತ್ರಗಳು ಇತಿಹಾಸಕ್ಕೆ ಸಂಬಂಧಿಸಿದ ವಿಜಯನಗರದ ನಾಣ್ಯಗಳನ್ನು, ಅವುಗಳ ಮೇಲಿನ ಬರಹಗಳನ್ನು ಆಕರವಾಗಿ ಬಳಸಿಕೊಳ್ಳುತ್ತಿದ್ದರೂ ಅವುಗಳನ್ನು ಶಿಲ್ಪಕಲೆಯ ದೃಷ್ಟಿಯಿಂದ ಪರಿಗಣಿಸಲಿಲ್ಲ. ಹೊಯ್ಸಳರ ಅಂತಿಮ ಕಾಲದೊಂದಿಗೆ ಹಂಪಿಯನ್ನು ಸಂಪರ್ಕಿಸಿತಾದರೂ ಅದನ್ನು ಮೊದಲನೆಯ ವಿಷ್ಣುವರ್ಧನ ಹಾಗೂ ನರಸಿಂಹ ನಾಣ್ಯಗಳನ್ನು ಹೋಲಿಸುವಂತಹ ಮತ್ತು ನಾಣ್ಯಗಳ ಕುರಿತಂತೆ ವಿವರವಾಗಿ ಚರ್ಚಿಸಿದ್ದಾರೆ. ಸಾಮಾನ್ಯವಾಗಿ ನಾಣ್ಯಗಳ ಮೇಲೆ ಪ್ರಾಣಿಗಳ ಚಿಹ್ನೆ ಮತ್ತು ದೇವತೆಗಳ ಚಿಹ್ನೆಗಳು ಕಂಡುಬರುವುವು. ಇವು ಧಾರ್ಮಿಕ ಸಂಬಂಧವನ್ನು ಹೊಂದಿರುತ್ತವೆ. ಅನೇಕ ಶಂಕು, ಚಕ್ರ, ಅಂಕುಶ, ಡಮರು, ಖಡ್ಗ, ಪಶುಗಳ, ಚಿಹ್ನೆಗಳು, ಗರುಡ, ಆನೆ, ಸಿಂಹ, ಗಂಡುಬೇರುಂಡ, ವರಾಹ, ನಂದಿಗಳು, ಪ್ರಾಣಿಗಳು, ಪತ್ನೀ ಸಮೇತ ಶಿವ, ವಿಷ್ಣು, ಬ್ರಹ್ಮ, ನರಸಿಂಹ, ಶ್ರೀರಾಮ, ಗಣಪತಿ, ಬಾಲಕೃಷ್ಣ ದೇವತೆಗಳು, ಇವು ವಿಜಯನಗರ ಕಾಲದ ನಾಣ್ಯಗಳಲ್ಲಿ ಅದ್ಭುತವಾದ ಕೆತ್ತನೆಗಳನ್ನು ಗುರುತಿಸಬಹುದು.

ವಿಜಯನಗರದ ಅರಸರು ವಿಜಯವಿಠ್ಠಲ ದೇವಾಲಯದ ಸಂಗೀತ ಮಂಟಪದಲ್ಲಿ ಸಂಗೀತ ನೃತ್ಯ ಉತ್ಸವಗಳನ್ನು ನಡೆಸುತ್ತಿದ್ದರು. ಈ ಮಂಟಪದ ಉಬ್ಬುಶಿಲ್ಪಗಳು ಬಳ್ಳಾರಿ ಜಿಲ್ಲೆಯ ವಾಸ್ತುಶಿಲ್ಪದ

ಅತ್ಯುತ್ತಮ ನಿದರ್ಶನಗಳಾಗಿವೆ. ವಿಜಯವಿಠ್ಠಲ ದೇವಾಲಯ ಮುಂದೆ ಇರುವ ಕಲ್ಲಿನ ರಥದಲ್ಲಿ ಚಿತ್ರಗಳನ್ನು ಆಲಂಕಾರಿಕವಾಗಿ ಕೆತ್ತಿರಿವುದನ್ನು ಕಾಣಬಹುದಾಗಿದೆ. ಹಂಪಿಯ ಸುತ್ತಮುತ್ತಲಿನಲ್ಲಿರುವ ಅನೇಕ ದೇವಾಲಯಗಳ ವಾಸ್ತು ಸೌಂದರ್ಯವು ಐತಿಹಾಸಿಕವಾಗಿ ಪ್ರಖ್ಯಾತವಾಗಿದ್ದು ಇವುಗಳಲ್ಲಿ ಸಾಮಾಜಿಕ ಚಿತ್ರಗಳು ಕಂಡುಬರುತ್ತವೆ.

ಪ್ರಸ್ತುತ ಅಧ್ಯಯನವು ಈ ಕೆಳಗಿನ ಉದ್ದೇಶಗಳನ್ನು ಹೊಂದಿದೆ.

೧. ಹಂಪಿ ಪ್ರದೇಶದ ಆದಿಮಾನವನ ಜೀವನದ ಹಿನ್ನೆಲೆಯನ್ನು ಗುರುತಿಸುವುದು.

೨. ಹಂಪಿ ಸ್ಮಾರಕಗಳಲ್ಲಿ ಶಿಲ್ಪಗಳ ಬಗೆಗೆ ತಿಳಿದುಕೊಳ್ಳುವುದು.

೩. ಶಿಲ್ಪಗಳು ಮತ್ತು ಚಿತ್ರಗಳಲ್ಲಿ ಪೌರಾಣಿಕ, ಸಾಮಾಜಿಕ, ಆರ್ಥಿಕ ಹಾಗೂ ರಾಜಕೀಯ ಜೀವನದ ಬಗ್ಗೆ ತಿಳಿಯುವುದು.

೪. ಸ್ಮಾರಕಗಳಲ್ಲಿ ಅಂದಿನ ಮತ್ತು ಇಂದಿನ ಅಂಶಗಳನ್ನು ಸಮುದಾಯಗಳ ಹಿನ್ನೆಲೆಯಲ್ಲಿ ಗುರುತಿಸುವುದು.

## ೧.೧. ಅಧ್ಯಯನದ ಉದ್ದೇಶ

ವಿಜಯನಗರ ಸಾಮ್ರಾಜ್ಯದಲ್ಲಿನ ಶ್ರೀ ಸಾಮಾನ್ಯರ ಸಾಮಾಜಿಕ ಬದುಕಿನ ಮೇಲೆ ಬೆಳಕು ಚೆಲ್ಲುವ ಕಾರ್ಯವು ವಿಜಯನಗರದ ಸಾಮ್ರಾಜ್ಯವನ್ನು ಆಳಿದವರು ಮಾಡಿರುವುದುಂಟು. ಸಾಮ್ರಾಜ್ಯ ವಿಸ್ತರಣೆಯಲ್ಲಿ, ಸ್ಮಾರಕಗಳ ರಚನೆಯಲ್ಲಿ, ಸಾಮ್ರಾಜ್ಯದ ಗುಡಿ ಗೋಪುರ, ಮನೆ ಮಠಗಳನ್ನು ಕಟ್ಟಿದವರು ಮತ್ತು ಅಲ್ಲಿನ ಶ್ರೀ ಸಾಮಾನ್ಯರು, ತಾವು ಸಮಾಜದಲ್ಲಿನ ಸಾಮಾಜಿಕ ಸಂಗತಿಗಳನ್ನು, ಹಾಗೂ ಹಂಪಿಯ ಸ್ಮಾರಕಗಳ ಮೇಲೆ ಬಿಡಿಸಿರುವ ಚಿತ್ರಗಳ ಮೂಲಕ ಸಾಮ್ರಾಜ್ಯದಲ್ಲಿ ತಾವು ಹೇಗೆ ಜೀವನ ಸಾಗಿಸಿದರು ಎನ್ನುವ ಸಂದೇಶವಾಗಿದೆ. ಈ ಉದ್ದೇಶದಿಂದ ಸ್ಮಾರಕಗಳಲ್ಲಿ ಶಿಲ್ಪ ಮತ್ತು ಚಿತ್ರಗಳಲ್ಲಿ ಸಾಮಾಜಿಕ ಜೀವನದ ಅನೇಕ ಸಂಗತಿಗಳ ಕುರಿತು ಅಧ್ಯಯನ ಮಾಡುವುದಾಗಿದೆ.

ವಿಜಯನಗರದಲ್ಲಿ ಕೃಷಿ, ಮೌಖಿಕ ಸಾಹಿತ್ಯ, ಆಚರಣೆ, ನಂಬಿಕೆ ಸಂಪ್ರದಾಯಗಳು ಈ ಹಂಪಿಯ ಸ್ಮಾರಕಗಳಲ್ಲಿ ಕಂಡುಬರುತ್ತವೆ. ಸಾಮ್ರಾಜ್ಯದ ನಿರ್ಮಾಣದ ಹಿಂದಿರುವ ರಾಜನ ಆಳ್ವಿಕೆಯಲ್ಲಿ ಜನಪದ ಬದುಕು ಅವರ ಜೀವನಾರ್ಥದ ವಿಧಾನವನ್ನು ಅರಿಯುವ ಪ್ರಯತ್ನ ಈ ಪ್ರಬಂಧದ ಅಧ್ಯಯನ ಉದ್ದೇಶವಾಗಿದೆ.

## ೧.೨. ಅಧ್ಯಯನದ ವ್ಯಾಪ್ತಿ

ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲೂಕಿನ ವಿಶ್ವವಿಖ್ಯಾತ ಪ್ರದೇಶಗಳಲ್ಲಿ ಒಂದಾದ ಹಂಪಿಯನ್ನು ಅಧ್ಯಯನಕ್ಕೆ ಸೀಮಿತಗೊಳಿಸಿದ್ದು, ಪ್ರಸ್ತುತ ಅಧ್ಯಯನಕ್ಕೆ ಇತಿಹಾಸ ಹೊಂದಿರುವ ಹಂಪಿಯ

ಪರಿಸರದ ಮತ್ತು ಅದರ ಚಾರಿತ್ರಿಕ ಇತಿಹಾಸದಲ್ಲಿ ಸಾಮಾಜಿಕ ಚಿತ್ರವನ್ನು ಕಾರ್ಯಕ್ಷೇತ್ರವಾಗಿ ಆರಿಸಿಕೊಳ್ಳಲಾಗಿದೆ. ಇಲ್ಲಿ ಲಿಖಿತ, ಸಾಮಗ್ರಿಗಳನ್ನು ಮತ್ತು ಕಂಠಸ್ಥ ಪರಂಪರೆಯ ಮೌಖಿಕ ಸಾಮಗ್ರಿಗಳು ಹೆಚ್ಚಾಗಿವೆ. ಹಂಪಿಯ ಪರಿಸರದ ವೈಭವವನ್ನು ಅನೇಕ ಸಾಮಾಜಿಕ ಚಿತ್ರಕಲೆ, ನೃತ್ಯ, ನಾಟಕ, ಸಾಹಿತ್ಯ, ಶಿಲ್ಪಕಲೆಗಳು, ರಾಮಾಯಣ, ಮಹಾಭಾರತ ಇನ್ನೂ ಅನೇಕ ರೀತಿಯ ವಿಷಯಗಳನ್ನೊಳಗೊಂಡ ಜನಸಾಮಾನ್ಯರ ಜೀವನವನ್ನು ಪ್ರತಿಬಿಂಬಿಸುವಂತಹ ಐತಿಹಾಸಿಕ ಸ್ಥಳವಾಗಿದೆ. ಸ್ಮಾರಕಗಳಲ್ಲಿರುವ ಚಿತ್ರಗಳು ಸಾಮಾಜಿಕ ಜೀವನವನ್ನು ತಿಳಿಸುತ್ತವೆ. ಆದ್ದರಿಂದ ಪ್ರಸ್ತುತ ಸಂಶೋಧನೆಯ ಅಧ್ಯಯನದ ಕಾರ್ಯ ವ್ಯಾಪ್ತಿಯನ್ನಾಗಿ ಆಯ್ಕೆಮಾಡಿ ಕೊಳ್ಳಲಾಗಿದೆ.

## ೧.೩. ಅಧ್ಯಯನದ ಸ್ವರೂಪ

ಹಂಪಿ ಪರಿಸರದ ಇತಿಹಾಸದಲ್ಲಿ ಸಾಮಾಜಿಕ ಚಿತ್ರಗಳಿಗೆ ಸಂಬಂಧಿಸಿದಂತೆ ಕ್ಷೇತ್ರಕಾರ್ಯ ಸಂದರ್ಭದಲ್ಲಿ ದೊರೆತ ಪ್ರಾಥಮಿಕ, ಆನುಷಂಗಿಕ ಹಾಗೂ ಇತರ ಆಕರಗಳನ್ನು ಸಾಮಾಜಿಕ ಚಿತ್ರಗಳು, ಶಿಲ್ಪಕಲೆಗಳು ಇತಿಹಾಸಕ್ಕೆ ಸಂಬಂಧಿಸಿದ ರಚನೆಯಲ್ಲಿ ಬಳಸಿಕೊಳ್ಳಲಾಗಿದೆ.

ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನದಲ್ಲಿ ಹಂಪಿಯ ಪರಿಸರದ ಇತಿಹಾಸದ ಬಗ್ಗೆ ಹೊಸದಾಗಿ ವಿಷಯವನ್ನು ಹೇಳುವುದು ಅವಶ್ಯಕವಾಗಿದೆ. ಮೊದಲನೆಯ ಅಧ್ಯಾಯದಲ್ಲಿ ಉದ್ದೇಶ, ವ್ಯಾಪ್ತಿ, ಸ್ವರೂಪ ಮತ್ತು ಮಹತ್ವಗಳನ್ನು ಒಳಗೊಂಡಿದೆ.

ಎರಡನೆಯ ಅಧ್ಯಾಯದಲ್ಲಿ ಹಂಪಿಯ ಸ್ಮಾರಕಗಳ ಪರಿಸರದ ಹಿನ್ನೆಲೆ ಮತ್ತು ಇತಿಹಾಸಗಳ ಆದಿಮಾನವರ ನೆಲೆ ಮತ್ತು ವಿಜಯನಗರದ ಕುರುಹುಗಳು ಕೆಲವೊಂದರ ಮಾಹಿತಿಗಳನ್ನು ಕಟ್ಟಿಕೊಡಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಹಂಪಿ ಪರಿಸರದ ಚಿತ್ರ ಮತ್ತು ಶಿಲ್ಪಕಲೆಗಳ ಕುರಿತು ಚರ್ಚಿಸಲಾಗಿದೆ. ಚಿತ್ರಕಲೆಗಳ ವಿಧಗಳಾದ ಭಿತ್ತಿಚಿತ್ರಗಳು, ಗವಿವರ್ಣ ಚಿತ್ರಗಳು, ಬಯಲುಬಂಡೆಯ ಚಿತ್ರಗಳು, ರೇಖಾಚಿತ್ರಗಳು, ಸ್ಮಾರಕಗಳ ಉಬ್ಬುಶಿಲ್ಪಗಳು, ಗಾರೆಶಿಲ್ಪಗಳ ಬಗ್ಗೆ ವಿಸ್ತಾರವಾದ ಅಧ್ಯಯನ ಮಾಡಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ ಹಂಪಿ ಪರಿಸರದ ಸಾಮಾಜಿಕ ಚಿತ್ರಗಳಾದ ಬೇಟೆ, ಪಶುಪಾಲನೆ, ಕೃಷಿ, ಕಲೆ, ಪುರಾಣ, ಯುದ್ಧ, ಪ್ರಾಣಿ–ಪಕ್ಷಿಗಳು, ಸಸ್ಯಪರಿಸರ ಕುರಿತ ಚಿತ್ರಗಳಲ್ಲಿ ವ್ಯಕ್ತಗೊಂಡಿರುವ ಸಾಮಾಜಿಕತೆಯನ್ನು ಅಧ್ಯಯನ ಮಾಡಲಾಗಿದೆ.

ಐದನೆಯ ಅಧ್ಯಾಯದಲ್ಲಿ ಅಧ್ಯಯನದ ಫಲಿತಗಳ ಸಂಕ್ಷಿಪ್ತ ಮಾಹಿತಿ ನೀಡಲಾಗಿದೆ.

ಆರನೆಯ ಅಧ್ಯಾಯದಲ್ಲಿ ಅನುಬಂಧಗಳು, ಆಕರಗ್ರಂಥಗಳು, ಛಾಯಾಚಿತ್ರಗಳು, ರೇಖಾಚಿತ್ರಗಳು ಇತ್ಯಾದಿ ವಿವರಗಳನ್ನು ಸಂಗ್ರಹಿಸಲಾಗಿದೆ.

## ೧.೪. ಅಧ್ಯಯನದ ಮಹತ್ವ

ಹಂಪಿ ಸ್ಮಾರಕಗಳಲ್ಲಿನ ಸಾಮಾಜಿಕ ಚಿತ್ರಗಳನ್ನು ಸೂಕ್ಷ್ಮವಾಗಿ ಅಧ್ಯಯನ ಮಾಡಿದಾಗ ಅದರಿಂದ ವ್ಯಕ್ತವಾಗುವ ಅಂದಿನ ಕಾಲದಲ್ಲಿ ಪೌರಾಣಿಕ, ಸಾಮಾಜಿಕ, ಧಾರ್ಮಿಕ, ರಾಜಕೀಯ

ಇತ್ಯಾದಿಗಳ ಇತಿಹಾಸದ ಸಂಗತಿಗಳ ಮೇಲಿನ ಹೆಚ್ಚಿನ ಸ್ಪಷ್ಟತೆಯನ್ನು ತಿಳಿಯಬಹುದಾಗಿದೆ. ಜನಪದರು ಹೀಗೆ ರಾಜ್ಯದೊಂದಿಗೆ ತಮ್ಮ ಸಾಮಾಜಿಕ ಬದುಕನ್ನು ಕಟ್ಟಿಕೊಡುವ ಪ್ರಯತ್ನವನ್ನು ನಾವು ನೋಡಬಹುದಾಗಿದೆ, ಜನಪದರಲ್ಲಿನ ಭಾವನೆಗಳು, ನಂಬಿಕೆಗಳು ಏಕೆ ಚಿತ್ರಗಳ ರೂಪದಲ್ಲಿ ವ್ಯಕ್ತಪಡಿಸಿದ್ದಾರೆ ಎಂಬುದನ್ನು ಅದರ ಹಿಂದಿನ ಸಾಮಾಜಿಕ ಸಂಗತಿಗಳಿಂದ ಕಾಣಬಹುದಾಗಿದೆ. ಮೌಖಿಕ ಸಾಮಗ್ರಿಗಳು ನೀಡುವ ಮಾಹಿತಿಗಳು ಅತ್ಯಂತ ಅಮೂಲ್ಯವಾದವುಗಳಾಗಿವೆ.

ವಿಶ್ವಪರಂಪರೆ ಪಟ್ಟಿಯಲ್ಲಿರುವ ಹಂಪಿಯ ಸ್ಮಾರಕ ಚಿತ್ರಗಳು ಹಾಗೂ ಶಿಲ್ಪಗಳ ಬಗ್ಗೆ ಕೆಲವು ಅಧ್ಯಯನಗಳು ನಡೆದಿವೆ. ಆದರೆ ಸ್ಮಾರಕಗಳಲ್ಲಿ ಶಿಲ್ಪ ಮತ್ತು ಚಿತ್ರಗಳಲ್ಲಿ ಸಾಮಾಜಿಕ ಜೀವನ ಕುರಿತು ಯಾವುದೇ ಕರಾರುವಕ್ಕಾದ ಅಧ್ಯಯನಗಳು ನಡೆದಿಲ್ಲ. ಹಂಪಿ ಆದಿಮಾನವನ ನೆಲೆಯಾಗಿದೆ. ಅಲ್ಲಿ ವಾಸಿಸುತ್ತಿದ್ದ ಜನ ಸಮುದಾಯ ಆದಿಮಾ ಕಾಲದ ಜೀವನ ಶೈಲಿಯನ್ನು ಗುರುತಿಸಲು ಅನುಕೂಲಕರವಾಗಿದೆ. ಅಲ್ಲಿ ಮೂಡಿಬಂದಿರುವ ಪೌರಾಣಿಕ, ಚಾರಿತ್ರಿಕ, ಸಾಮಾಜಿಕ, ಆರ್ಥಿಕ, ಧಾರ್ಮಿಕ ಮತ್ತು ರಾಜಕೀಯ ಮಾಹಿತಿ ಇರುವ ಚಿತ್ರಗಳನ್ನು ಗುರಿತಿಸುವುದು ಮುಖ್ಯವಾಗಿದೆ.

ಇತಿಹಾಸದಲ್ಲಿ ಸರ್ವಕಾಲೀನ ಅಭಿವ್ಯಕ್ತಿಯು ಏನೂ ಇಲ್ಲದ ಅವುಗಳ ಕಾಲ, ಸ್ಥಳ, ವ್ಯಕ್ತಿ ಮತ್ತು ವೃತ್ತಿಗಳನ್ನು ಗುಣವಾಗಿ ಸಂದರ್ಭ ಅನುಸಾರವಾಗಿ ಅಭಿವ್ಯಕ್ತಿಯನ್ನು ಗುರುತಿಸುವುದೇ ಅಧ್ಯಯನದ ಮಹತ್ವವಾಗಿದೆ.

### ೧.೫. ಅಧ್ಯಯನದ ಸಮೀಕ್ಷೆ

ಒಂದು ವಿಷಯದ ಬಗ್ಗೆ ಸಂಪೂರ್ಣವಾಗಿ ಅರ್ಥೈಸಿಕೊಳ್ಳಬೇಕಾದರೆ ನಮ್ಮ ಜ್ಞಾನ ಅಭಿವೃದ್ಧಿಗಾಗಿ ಅನೇಕ ಆಕರ ಗ್ರಂಥಗಳು ಅಧ್ಯಯನಕ್ಕೆ ತುಂಬ ಅವಶ್ಯಕವಾಗಿವೆ. ಒಂದು ಸಂಶೋಧನೆಯಲ್ಲಿ ಯಶಸ್ಸನ್ನು ಸಾಧಿಸಲು ಮೂಲಗ್ರಂಥಗಳು, ಆಧಾರಗಳು ಅತ್ಯಾವಶ್ಯಕವಾಗಿವೆ ಹಾಗೂ ಕ್ಷೇತ್ರಕಾರ್ಯದಿಂದ ನಮ್ಮ ಸಂಶೋಧನೆಗೆ ಸ್ಪಷ್ಟವಾದ ಚಿತ್ರವನ್ನು ನೀಡುವ ದಾರಿದೀಪವಾಗಿದೆ. ಇದಲ್ಲದೆ ಪುಸ್ತಕದ ಬಳಕೆ ಮತ್ತು ಸುತ್ತಮುತ್ತಲಿನ ಜನಸಾಮಾನ್ಯರ ಮಾಹಿತಿ ಆಕರಗಳು ಬಹುಮುಖ್ಯವಾಗಿರುತ್ತದೆ.

ಹಂಪಿ ಸ್ಮಾರಕಶಿಲ್ಪ ಹಾಗೂ ಚಿತ್ರಗಳಲ್ಲಿ ಸಾಮಾಜಿಕ ಜೀವನ ಎಂಬ ಅಧ್ಯಯನವು ಸಂಶೋಧನಾ ಪ್ರಬಂಧಕ್ಕೆ ಅನುಕೂಲವಾಗುವಂತ ವಿಜಯನಗರ ಪೂರ್ವ ಆದಿಮ ಸಂಸ್ಕೃತಿಯಲ್ಲಿ ಸಾಮಾಜಿಕ ಹಾಗೂ ಸಾಂಸ್ಕ್ರತಿಕ ಅಂಶಗಳನ್ನು ಕಂಡುಬರುತ್ತಾವೆ. ಆದಿಮಾನವನ ಸಮಾಜದ ಹಲವಾರು ವಿಷಯಗಳನ್ನು ಅರ್ಥೈಸುವಂತಹ  ಇನ್ನಿತರ, ಕಲೆ, ಸಾಹಿತ್ಯ, ಸಾಂಸ್ಕೃತಿಕ ಗವಿವರ್ಣಚಿತ್ರ ,ಯುದ್ದಚಿತ್ರ ಕೃಷಿ, ಪಶುಪಾಲನೆ, ಬೇಟೆ ಸಸ್ಯಸಂಕುಲ, ಜೀವಸಂಕುಲ, ಗಾರೆಶಿಲ್ಪ ಉಬ್ಬುಶಿಲ್ಪಕಲೆ. ಚಿತ್ರಕಲೆ ಪೌರಾಣಿಕ ಚಾರಿತ್ರಿಕ, ಸಾಮಾಜಿಕ ಜೀವನದ ಚಿತ್ರಗಳಲ್ಲಿ ಜನಸಮಾನ್ಯರ ಸಾಂಸ್ಕೃತಿಕ ಬದುಕನ್ನು ಪ್ರತಿಬಿಂಬಿಸುವಂತಹ, ನಿಸರ್ಗದ ಸಂಪತ್ತು, ಶಿಲ್ಪಕಲೆ ಮತ್ತು ಅನೇಕ ಲೇಖಕರ ಗ್ರಂಥಗಳನ್ನು ವಿಮರ್ಶಿಸುವ ಮೂಲಕ ಅಧ್ಯಯನಕ್ಕೆ ಹೊಸ ಅಂಶಗಳನ್ನು ತುಂಬಲಾಗಿದೆ.

ಹಂಪಿಯ ಸ್ಮಾರಕಗಳಲ್ಲಿ ಜಾನಪದೀಯ ಅಂಶಗಳು ಎಂಬ ಗ್ರಂಥದಲ್ಲಿ ಸಾಮಾಜಿಕವಾಗಿ, ಧಾರ್ಮಿಕವಾಗಿ, ಪೌರಾಣಿಕವಾಗಿ, ಸಾಹಿತ್ಯಕ, ಸಾಂಸ್ಕೃತಿಕವಾಗಿ ಹಾಗೂ ಶೈಕ್ಷಣಿಕವಾಗಿ, ಕಲೆ, ಸಂಗೀತ, ಸಾಂಸ್ಕೃತಿಕ ಚಿತ್ರಣಗಳ ವಿನ್ಯಾಸವು ಭೌತಿಕವಾಗಿ ವಾಸ್ತುಶಿಲ್ಪಕಲೆಗಳ ಬಗ್ಗೆ ಜೀವನದ ಬದುಕನ್ನು ಕಟ್ಟಿಕೊಡುವಂತಹ ಉತ್ತಮವಾದ ಜನಸಾಮಾನ್ಯರಿಗೆ ಜೀವನಕ್ಕೆ ಮತ್ತು ಸಂಸ್ಕೃತಿಯ ಅಳವಡಿಕೆಯನ್ನು ರೂಪಿಸುವ ಒಂದು ಉತ್ತಮ ಅಧ್ಯಯನವಾಗಿದೆ. ಜನಸಾಮಾನ್ಯರ ಬದುಕಿನ ಬಗೆಗೆ ಮಾಹಿತಿ ದೊರೆಯುತ್ತದೆ.

"ಹಂಪಿ ಪರಿಸರದ ಆದಿಮಾನವನ ನೆಲೆಗಳು ಎಂಬ ಗ್ರಂಥದಲ್ಲಿ ಹಂಪಿಯು ಪ್ರಾಚೀನ ಕಾಲದಿಂದಲೂ ಉತ್ತಮವಾದ ಭೌಗೋಳಿಕ ಪರಿಸರ ಹೊಂದಿದ ಆದಿಮಾನವ ಹಂಪಿ ಪರಿಸರದ ನೆಲೆಗಳಲ್ಲಿ ಹಿಂದಿನಿಂದಲೂ ವಾಸಿಸುತ್ತಾ ಬಂದಿದ್ದಾನೆ."[೨] ಇಲ್ಲಿ ನೆಲೆಯೂರಿದ ಆದಿಮಾನವ ತನ್ನ ಹಲವು ಕುರುಹುಗಳನ್ನು ಸಾಮಾಜಿಕ ಜೀವನದ ಕಲೆ, ಸಾಹಿತ್ಯ, ಸಾಮಾಜಿಕ, ಪೌರಾಣಿಕ, ಧಾರ್ಮಿಕ, ಸಂಸ್ಕೃತಿಗಳಲ್ಲಿ ನೈಜ ರೂಪತೆಯನ್ನು ಇಲ್ಲಿ ಬಿಟ್ಟು ಹೋಗಿದ್ದಾನೆ, ಇವು ಅಂದಿನ ಸಂಸ್ಕೃತಿಯನ್ನು ಅವನ ಜೀವನ ಶೈಲಿಯನ್ನು ಅರಿಯಲು ಏಕಮೇವ ಆಧಾರಗಳಾಗಿವೆ. ಈ ಹಿನ್ನೆಲೆಯಲ್ಲಿ ಹಂಪಿ ಪರಿಸರದ ಪ್ರಾಗೈತಿಹಾಸಿಕ ಕಾಲದ ಆದಿಮಾನವನ ನೆಲೆಗಳನ್ನು ಮತ್ತು ಅವುಗಳ ಮಹತ್ವವನ್ನು ಪುರಾತತ್ವ ಮತ್ತು ಮಾನವ ಶಾಸ್ತ್ರ ಹಿನ್ನೆಲೆಯ ಮೇಲೆ ಪ್ರಭಾವ ಬೀರುವ ಸಮಾಜದ ಕಲೆ, ಸಾಹಿತ್ಯ, ಧಾರ್ಮಿಕ, ಪೌರಾಣಿಕ, ಸಂಸ್ಕೃತಿಗಳಲ್ಲಿ, ನೈಜ ರೂಪತೆಯನ್ನು ಭೌಗೋಳಿಕ ಲಕ್ಷಣಗಳು ಮಾನವನ ಮೇಲೆ ಉತ್ತಮ ಪ್ರಭಾವ ಬೀರುವ ಲೇಖನವಾಗಿದೆ.

ಶಿಲಾಯುಗದ ಗವಿಚಿತ್ರ ಎಂಬ ಗ್ರಂಥದಲ್ಲಿ ವರ್ಣಚಿತ್ರದ ಗವಿಗಳ ಶೋಧನೆ, ಬಂಡೆ ಗವಿಚಿತ್ರಗಳ ಶೋಧನೆಯ ಇತಿಹಾಸದಲ್ಲಿಯೇ ವಿಶೇಷವಾದವು. "ಗವಿಯಲ್ಲಿ ಸಾಮಾಜಿಕ ಚಿತ್ರಗಳ ಅನ್ವೇಷಣೆಯ ಕಾಲದಲ್ಲಿ ಅವನ ಚಿಕ್ಕಮಗಳು ಜೊತೆಗಿದ್ದಳು. ಒಮ್ಮೆ ಅವನು ಗವಿಯ ಪ್ರದೇಶದಲ್ಲಿ ಅಗೆಯುತ್ತಿರುವಾಗ ಆ ಹುಡುಗಿಯು ಸಹಜವಾಗಿ ಹುಡುಗಾಟಿಕೆಯಿಂದ ಬಂಡೆಯ ಮೇಲೆ ಬರೆದ ಗೂಳಿಗಳ ಚಿತ್ರಗಳನ್ನು ನೋಡಿ ಆಶ್ಚರ್ಯವಾಯಿತು."[೩] ನಂತರ ಜನಸಾಮಾನ್ಯರು ಸಹ ಗವಿಯೊಳಗೆ ಹೋಗಿ ಆ ಕುತೂಹಲಕಾರಿಯಾದ ದೊಡ್ಡ ದೊಡ್ಡ ಬಲಿಷ್ಠ ಕೋಣಗಳ ಚಿತ್ರಗಳನ್ನು ನೋಡಿ ಜನಸಾಮಾನ್ಯರು ಪುಳಕಿತರಾದರು. ಬಯಲು ಬಂಡೆ ಚಿತ್ರಗಳ ಕ್ರಮ ಸಹಜವಾಗಿ ಭಿನ್ನವಾಗಿ ದೊಡ್ಡ ದೊಡ್ಡ ಬಂಡೆಗಳ ರಾಶಿಯಂತಿರುವ ಬೆಟ್ಟಗಳ ಮಧ್ಯದ ಮತ್ತು ಮೇಲಿನ ಹಂತಗಳಲ್ಲಿ ಬಯಲಿನಲ್ಲಿರುವ ಬಂಡೆಗಳಲ್ಲಿ ಇಲ್ಲವೇ, ನೀರಿನ ತಾಣದಲ್ಲಿಯ ಬಂಡೆಗಳಲ್ಲಿ ಇಂತಹ ಚಿತ್ರಗಳು ಕಂಡುಬರುತ್ತವೆ. ಸಾಮಾನ್ಯ ಮೇಲ್ಮೈ ಮೇಲೆ ಬೇಕಾದ ಚಿತ್ರವನ್ನು ಮೂಡಿಸುವುದಕ್ಕೆ ಅನುಕೂಲಕರವಾದ ಸಂಪೂರ್ಣವಾದ ಮೊಂಡು ತುದಿಯುಳ್ಳ ಉದ್ದನೆ ಕಲ್ಲು ತುಂಡಿನಿಂದ ಕುಟ್ಟಿ ಕುಟ್ಟಿ ಬಿಡಿಸುವುದು, ಇಲ್ಲವೇ ಉಳಿಯಂತಹ ಮೊನಚಾದ ಉಪಕರಣಗಳಿಂದ ಗೆರೆಗಳನ್ನು ಮೂಡಿಸಿ ಚಿತ್ರಗಳನ್ನು ಬಿಡಿಸುತ್ತಿದ್ದರು.

ಸಮಾಜಕ್ಕೆ ವಾಸ್ತು ಶಿಲ್ಪ, ಶಿಲ್ಪಕಲೆ, ಚಿತ್ರಕಲೆಯ ದೃಷ್ಟಿಯಿಂದ ಆವರೆಗೆ ಬೆಳೆದು ಬಂದಿದ್ದ ಶೈಲಿ, ಮಾಧ್ಯಮ ಆಕಾರಗಳ ಗಾತ್ರ ಇತ್ಯಾದಿಗಳ ಎಲ್ಲಾ ದೃಷ್ಟಿಯಿಂದಲೂ ವಿಜಯನಗರದ ಕಲೆ ಬೇರೆಯದೇ ಆಗಿ ನಿಲ್ಲುವುದು ಒಂದು ಮಹತ್ವ ಬದಲಾವಣೆಯನ್ನು ತಿಳಿಸಲಾಗಿದೆ. ಆದರೆ ಶಿಲ್ಪ ಮತ್ತು ಚಿತ್ರಗಳಲ್ಲಿ ಬದುಕಿನ ಅನನ್ಯತೆಯನ್ನು ಸೂಚಿಸುವ ಚಿತ್ರಗಳು ಮಹತ್ವವಾದವು. ಸಾಮಾಜಿಕ ಶಿಲ್ಪಗಳ ಕುರಿತ ಮಾಹಿತಿಯೂ ದೊರೆಯುತ್ತದೆ.

"ಶೀಲಾಕಾಂತ ಪತ್ತಾರ ಅವರ ಬಾದಾಮಿ ಚಾಲುಕ್ಯ ಶಿಲ್ಪಕಲೆ ಎಂಬ ಕೃತಿಯಲ್ಲಿ ಚಾಲುಕ್ಯರ ಕಾಲದಲ್ಲಿ ಮರುಳು ಶಿಲೆ, ಧಾರ್ಮಿಕ ಶಿಲೆಗಳು, ಲೌಕಿಕ ಶಿಲ್ಪಗಳು, ಶಿಲ್ಪಕಲೆಯ ವೈವಿಧ್ಯ ಮತ್ತು ವೈಶಿಷ್ಟ್ಯಗಳುಳ್ಳ ಶಿಲ್ಪಗಳ ಬಗೆಗೆ ಪ್ರಸ್ತುತವಾದ ವಿಷಯವನ್ನು ಒಳಗೊಂಡಿದ್ದು."[೪] ಶಿಲ್ಪಗಳ ರಚನೆ ಇದೆ. ಅದರಲ್ಲಿ ಜೀವನ ವಿಧಾನದ ಚಿತ್ರಗಳು ಬಿಂಬವಾಗಿರುವುದುಂಟು. ರಾಜಮಹಾರಾಜರು ಶಿಲ್ಪಕಲೆಗೆ ಪ್ರೋತ್ಸಾಹ ನೀಡುವ ಅಂಶ ಮಹತ್ವದ್ದಾಗಿದೆ.

ಚಿನ್ನಸ್ವಾಮಿ ಸೋಸಲೆಯವರ ಸಾಮ್ರಾಜ್ಯ ಮತ್ತು ಸಂಸ್ಥಾನ ಎಂಬ ಕೃತಿಯಲ್ಲಿ "ಸಾಮಾನ್ಯವಾಗಿ ಯಾವುದೇ ಸಾಮ್ರಾಜ್ಯವಾಗಲಿ ಅಥವಾ ಸಂಸ್ಥಾನವಾಗಲಿ ಸ್ಥಾಪನೆ ಮಾಡಬೇಕೆಂದರೆ ಮೊದಲಿಗೆ ಕೈಗೊಳ್ಳುತ್ತಿದ್ದ ಕಾರ್ಯವೆಂದರೆ ದೇವಾಲಯಗಳ ನಿರ್ಮಾಣ. ಚಿತ್ರಕಲೆ, ಶಿಲ್ಪಕಲೆ, ಸಾಹಿತ್ಯ, ಸಂಗೀತ ಇನ್ನು ಅನೇಕ ವಿಧಿವಿಧಾನಗಳಿಂದ ಜಾನಪದ ಸಂಸ್ಕೃತಿಯ ನೆಲೆ ಹಾಗೂ ಸಾಮಾಜಿಕಕ್ಕೆ ಸಂಬಂಧಿಸಿವೆ. ಸ್ಮಾರಕಗಳು ಚಾರಿತ್ರಿಕ ದೃಶ್ಯಗಳನ್ನು ಒಳಗೊಂಡಂತಹ ಹಿನ್ನೆಲೆ ಹೊಂದಿದೆ ಎಂಬುದನ್ನು ತಿಳಿಸುತ್ತದೆ."[೫]

ಇಲ್ಲಿ ನಾನು ನನ್ನ ಅಧ್ಯಯನದಲ್ಲಿ "ಹಂಪಿಯ ಸ್ಮಾರಕಶಿಲ್ಪ ಹಾಗೂ ಚಿತ್ರಗಳಲ್ಲಿ ಸಾಮಾಜಿಕ ಜೀವನ" ಎಂಬ ವಿಷಯ ಕುರಿತು ಪ್ರಸ್ತುತ ಅಧ್ಯಯನ ಕೈಗೊಂಡಿದ್ದು. ಆದಿಮಾನವನ ನೆಲೆಯಿಂದ ಇಂದಿನವರೆಗೂ ಇರುವ ಶಿಲ್ಪಕ್ಕೆ ಮತ್ತು ಚಿತ್ರಗಳಲ್ಲಿ ಸಾಮಾಜಿಕ ಬದುಕಿನ ಮಾಹಿತಿ ತಿಳಿಯುವುದಾಗಿದೆ. ಶಿಲಾಯುಗದ ಗವಿವರ್ಣ ಚಿತ್ರಗಳ ಸಾಮಾಜಿಕ ಚಿತ್ರಗಳು ಜನಸಾಮಾನ್ಯರ ಮನಸೆಳೆಯುವಂತಾಗಿವೆ.

### ೧.೬. ಅಧ್ಯಯನದ ವಿಧಾನಗಳು

ಪ್ರಸ್ತುತ ಅಧ್ಯಯನವು "ಹಂಪಿ ಸ್ಮಾರಕಶಿಲ್ಪ ಹಾಗೂ ಚಿತ್ರಗಳಲ್ಲಿ ಸಾಮಾಜಿಕ ಜೀವನ" ಕಂಡುಬರುವ ಹಲವು ಬಗೆಯ ಸಮಾಜದ ಚಿತ್ರಗಳನ್ನೊಳಗೊಂಡ ಹಿನ್ನೆಲೆಯ ಕಲೆ ಪೌರಾಣಿಕ, ಚಾರಿತ್ರಿಕ, ಸಾಂಸ್ಕೃತಿಕ, ಸಾಮಾಜಿಕ, ಧಾರ್ಮಿಕ, ಆರ್ಥಿಕ ಹಾಗೂ ರಾಜಕೀಯ ಬಗೆಗ ಇರುವ ಸಮುದಾಯಗಳ ಜೀವನದ ಸಾಮಾಜಿಕ ಮತ್ತು ಪೌರಾಣಿಕ ಸನ್ನಿವೇಶಗಳ ಅಧ್ಯಯನವು ಮತ್ತು ವಿಶ್ಲೇಷಣೆಗೆ ಒಳಪಡಿಸುವ ವಿಧಾನದಿಂದ ಅಧ್ಯಯನ ಮಾಡಬಹುದಾಗಿದೆ.

#### ಅವಲೋಕನ ವಿಧಾನ

ಹಂಪಿ ಸ್ಮಾರಕಶಿಲ್ಪ ಹಾಗೂ ಚಿತ್ರಗಳಲ್ಲಿ ಸಾಮಾಜಿಕ ಜೀವನ ಕುರಿತು ಮಾಹಿತಿಯನ್ನು ಪಡೆಯಲು ಕ್ಷೇತ್ರಕಾರ್ಯದಲ್ಲಿ ಅವಲೋಕನ ವಿಧಾನವು ಮುಖ್ಯವಾದದು. ಅವಲೋಕನ ವಿಧಾನವು

ಸಾಮಾಜಿಕ ಸಂಶೋಧನೆಯಲ್ಲಿ ಮುಖ್ಯ ಸಾಧನೆಯ ತಂತ್ರಗಳಲ್ಲೊಂದು. ಪ್ರಶ್ನಾವಳಿ ಮತ್ತು ಸಂದರ್ಶನ ಅವಧಿಯಲ್ಲಿ ಕಂಡುಬರಬಹುದಾದ ಕೆಲವು ಸಮಸ್ಯೆಗಳನ್ನು ಅವಲೋಕದ ಮೂಲಕ ಬಗೆಹರಿಸಿಕೊಳ್ಳಲು ಸಾಧ್ಯವಾಗುತ್ತದೆ. ಹಂಪಿ ಸ್ಮಾರಕಶಿಲ್ಪ ಹಾಗೂ ಚಿತ್ರಗಳಲ್ಲಿ ಸಾಮಾಜಿಕ ಜೀವನ ಕುರಿತು ಕಲೆಯ ಬದುಕನ್ನು ಅಳವಡಿಸಿಕೊಳ್ಳಲು ಹಾಗೂ ಮಾಹಿತಿಯನ್ನು ತಿಳಿದುಕೊಳ್ಳಲು ಅಧ್ಯಯನಕ್ಕೆ ಪೂರಕವಾಗಿ ರೂಪಿಸಿಕೊಳ್ಳಬಹುದಾಗಿದೆ.

ಮಾಹಿತಿಯನ್ನು ಸಂಗ್ರಹಿಸಲು ಮುಖ್ಯವಾಗಿ ಕ್ಷೇತ್ರಕಾರ್ಯವು ಉಪಯುಕ್ತವಾಗಿದೆ. ಇದರ ಜೊತೆಗೆ ಕೆಲವೊಂದರ ಉಪಕರಣಗಳು ಅವಶ್ಯಕವಾದ ವಿಷಯಗಳು ಆಗಿರುತ್ತದೆ ಲ್ಯಾಪ್‌ಟಾಪ್, ಕ್ಯಾಮರ, ಬುಕ್, ಪೆನ್ನು, ವೀಡಿಯೋ ಇನ್ನೂ ಅನೇಕ ಉಪಕರಣಗಳಿಂದ ಮಾಹಿತಿ ಸಂಗ್ರಹಣಕ್ಕೆ ಮೂಲ ಪರಿಕರಗಳಾಗಿವೆ. ಮಾಹಿತಿಯನ್ನು ತಿಳಿದು ಅಧ್ಯಯನಕ್ಕೆ ಪೂರಕವಾಗಿ ರೂಪಿಸಿಕೊಳ್ಳಬಹುದು.

**ಪ್ರಶ್ನಾವಳಿ ವಿಧಾನ**

ಅಧ್ಯಯನಕ್ಕೆ ಸಂಬಂಧಿಸಿದ ಕಲೆ, ಸಾಹಿತ್ಯ, ಸಂಸ್ಕೃತಿ ಜನಪದದ ಅವಲೋಕನೆಯಿಂದ ಹಂಪಿ ಸ್ಮಾರಕಗಳಲ್ಲಿ ಕಂಡುಬರುವ ಸಾಮಾಜಿಕ ಚಿತ್ರಗಳ ಅಧ್ಯಯನ ಮಾಡಲು ಹಾಗೂ ಮಾಹಿತಿ ಪಡೆಯಲು ಪ್ರಶ್ನಾವಳಿ ಪ್ರಮುಖ ಪಾತ್ರ ವಹಿಸುತ್ತದೆ. ಅಧ್ಯಯನ ಮುಖ್ಯ ಉದ್ದೇಶಗಳಿಗೆ ಅನುಗುಣವಾಗಿ ವಿವಿಧ ಆಯಾಮಗಳಲ್ಲಿ ಹಲವಾರು ಪ್ರಶ್ನೆಗಳನ್ನು ಹೊಂದಿರುವ ಸೂಕ್ತ ಪ್ರಶ್ನಾವಳಿಯನ್ನು ತಯಾರಿಸಿಕೊಂಡು ಮಾಹಿತಿಯನ್ನು ಪಡೆಯಲು ಆ ಮೂಲಕ ಸಮುದಾಯಗಳ ಸಂದರ್ಶನ ಮಾಡಿ ಮಾಹಿತಿಯನ್ನು ಸಂಗ್ರಹಣೆ ಮಾಡಲಾಗಿದೆ.

**ಸಂದರ್ಶನ ವಿಧಾನ**

ಸಂದರ್ಶನ ವಿಧಾನ ಎನ್ನುವುದು ಸಾಮಾಜಿಕ ಜೀವನ ಚಿತ್ರಗಳ ಸಂಶೋಧನೆಯ ಕ್ಷೇತ್ರದಲ್ಲಿ ಮಾಹಿತಿ ಸಂಗ್ರಹಿಸಲು ಹೆಚ್ಚು ಪರಿಣಾಮಕಾರಿ ಹಾಗೂ ಯಶಸ್ವಿ ವಿಧಾನವಾಗಿದೆ. ಸಂದರ್ಶನ ಎಂದಕೂಡಲೆ ಕೇವಲ ಭಾಷೆ ಮತ್ತು ಸಮುದಾಯಗಳ ಚಿತ್ರಗಳ ಅಭಿಪ್ರಾಯವನ್ನು ವಿನಿಮಯ ಮಾಡಿಕೊಳ್ಳುವ ಮತ್ತು ಮಾಹಿತಿಯನ್ನು ಸಂಗ್ರಹಿಸುವ ಉದ್ದೇಶವಾಗಿದೆ. ಹಂಪಿ ಸ್ಮಾರಕಗಳಲ್ಲಿರುವ ಸಾಮಾಜಿಕ ಚಿತ್ರಗಳ ಅಧ್ಯಯನದ ಸಂಪೂರ್ಣ ಮಾಹಿತಿಯನ್ನು ಪಡೆಯುವುದರ ಸಲುವಾಗಿ ಸಂದರ್ಶನವು ಮುಖ್ಯ ಅವಶ್ಯಕವಾಗಿದೆ.

**ಐತಿಹಾಸಿಕ ವಿಧಾನ**

ಹಂಪಿ ಸ್ಮಾರಕಶಿಲ್ಪ ಮತ್ತು ಚಿತ್ರಗಳಲ್ಲಿನ ಸಾಮಾಜಿಕ ಜೀವನಾರ್ಥಕ್ಕೆ ಸಾಕ್ಷಿಯ ಕಲಾವಿದನ ಬದುಕುವ ಅನೇಕ ಕಲೆ, ಸಂಸ್ಕೃತಿ, ಪೌರಾಣಿಕ ರಾಮಾಯಣದ, ಮಹಾಭಾರತಾರ್ಥದ ಇತಿಹಾಸವನ್ನೇ ಹುರಿದುಂಬಿಸುವ ಸಾಮಾಜಿಕ ಚಿತ್ರಗಳ ಬಳಕೆಯು ಅವಶ್ಯಕವಾಗಿದೆ. ಹಂಪಿಯಲ್ಲಿನ ಸಾಮಾಜಿಕ

ಚಿತ್ರಗಳಲ್ಲಿನ ಒಂದರ್ಥದಲ್ಲಿ ವಿಶೇಷತೆಯನ್ನು ಬಿಂಬಿಸುವ ಸಮಾಜವನ್ನು ಅರ್ಥೈಸುವ ವಿವಿಧ ರೀತಿಯ ಮಾಹಿತಿ ಪಡೆದುಕೊಂಡು ಅಧ್ಯಯನದ ವಿಷಯಕ್ಕೆ ಶಕ್ತಿ ಕೊಡುವಂತಹ ಮಹಾಪ್ರಬಂಧವನ್ನು ಕಟ್ಟಿಕೊಡುವಂತಹ ಪ್ರಯತ್ನ ಮಾಡಲಾಗುವುದು.

**ಸಂಶೋಧನಾ ಸಾಧನಗಳು**

ಪ್ರಸ್ತುತ ಅಧ್ಯಯನದಲ್ಲಿ ವಿಷಯದ ಅರಿವು ಮೂಡಿಸುವಂತಹ ಉದ್ದೇಶದಿಂದ ಆಧುನಿಕ ಉಪಕರಣಗಳನ್ನು ಉಪಯೋಗಿಸಿ ಅಧ್ಯಯನ ಮಾಡುತ್ತಿದ್ದು ಅದಕ್ಕಾಗಿ ಗಣಕಯಂತ್ರ, ಹ್ಯಾಂಡಿಕ್ಯಾಮ್, ಕ್ಯಾಮರ, ಐಪ್ಯಾಡ್, ಟೇಪ್‌ರೆಕಾರ್ಡರ್ ಮತ್ತು ನೋಟ್‌ಬುಕ್, ಪೆನ್ನು ಹಾಗೂ ಮೂಲಭೂತ ಸಾಮಗ್ರಿಗಳನ್ನು ಬಳಸಿಕೊಳ್ಳಲಾಗುವುದು.

**ಪರಿಸಮಾಪ್ತಿ**

ಕ್ಷೇತ್ರಕಾರ್ಯದ ಮೂಲಕ ಹಂಪಿ ಸ್ಮಾರಕಶಿಲ್ಪ ಮತ್ತು ಚಿತ್ರಗಳಲ್ಲಿ ಸಾಮಾಜಿಕ ಚಿತ್ರಗಳ ಅಧ್ಯಯನ ಕುರಿತು ಪ್ರಸ್ತುತ ಪೌರಾಣಿಕ ಕಲೆ, ಶಿಲ್ಪ ಮತ್ತು ಚಿತ್ರಗಳಲ್ಲಿ ಕಂಡುಬರುವಂತಹ ಸಾಮಾಜಿಕ ಜೀವನ ಚಿತ್ರಗಳಿವೆ. ಹಂಪಿಯ ಸ್ಮಾರಕಗಳಲ್ಲಿನ ಸಾಮಾಜಿಕ ಚಿತ್ರಗಳಲ್ಲಿ ಕಲೆ, ಸಾಹಿತ್ಯ, ರಾಮಾಯಣ, ಮಹಾಭಾರತ, ಪೌರಾಣಿಕ, ಗಿರಿಜಾಕಲ್ಯಾಣದಂತ. ಸಾಮಾಜಿಕ, ನೈತಿಕತೆ, ರಾಜಕೀಯ, ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ಧಾರ್ಮಿಕ ಕ್ಷೇತ್ರದಲ್ಲಿ ಹಂಪಿಯು ದಾರ್ಶನಿಕ ಕ್ಷೇತ್ರವಾಗಿದ್ದು, ಈ ಚಿತ್ರಗಳಿಂದ ಸಾಮಾಜಿಕ ಜೀವನದ ಮಹತ್ವ ಅರಿಯಲು ಸಾಧ್ಯವಾಗುತ್ತದೆ.

**ಅಡಿಟಿಪ್ಪಣಿಗಳು**

೧. ಚಲುವರಾಜು, ಹಂಪಿ ಸ್ಮಾರಕಗಳಲ್ಲಿ ಜಾನಪದೀಯ ಅಂಶಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦, ಪು-೨

೨. ಶ್ರೀನಿವಾಸ ಎಲ್., ಹಂಪಿ ಪರಿಸರದ ಆದಿಮಾನವನ ನೆಲೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦, ಪು-೧೬

೩. ಶರಣಬಸಪ್ಪ ಕೋಲ್ಕಾರ, ಶಿಲಾಯುಗದ ಗವಿಚಿತ್ರಗಳು, ಬಸವ ಪ್ರಕಾಶನ ಮತ್ತು ಪುಸ್ತಕ ವ್ಯಾಪಾರಿಗಳು, ಗುಲ್ಬಾರ್ಗಾ, ೨೦೧೫, ಪು-೪

೪. ಶೀಲಾಕಾಂತ ಪತ್ತಾರ, ಬಾದಾಮಿ ಚಾಲುಕ್ಯರ ಶಿಲ್ಪಕಲೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೮, ಪು-೮

೫. ಚಿನ್ನಸ್ವಾಮಿ ಸೋಸಲೆ ಎನ್., ಸಾಮ್ರಾಜ್ಯ ಮತ್ತು ಸಂಸ್ಥಾನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪, ಪು-೧೪೬

ಅಧ್ಯಾಯ : ಎರಡು

# ಹಂಪಿ ಪರಿಸರದ ಹಿನ್ನೆಲೆ

೨.೧. ಭೌಗೋಳಿಕ ಹಿನ್ನೆಲೆ

೨.೨. ಪೌರಾಣಿಕ ಹಿನ್ನೆಲೆ

೨.೩. ಚಾರಿತ್ರಿಕ ಹಿನ್ನೆಲೆ

೨.೪. ಸಾಮಾಜಿಕ ಹಿನ್ನೆಲೆ

ಅಧ್ಯಾಯ : ಎರಡು

# ಹಂಪಿ ಪರಿಸರದ ಹಿನ್ನೆಲೆ

## ಪೀಠಿಕೆ

ಯಾವುದೇ ಒಂದು ಪ್ರದೇಶವು ತನ್ನದೇ ಆದ ವಿಶಿಷ್ಟ ಭೌಗೋಳಿಕ ಲಕ್ಷಣಗಳನ್ನು ಒಂದು ಪ್ರದೇಶದ ಬೆಳವಣಿಗೆಯು ಅಲ್ಲಿನ ಭೌಗೋಳಿಕ ಅಂಶಗಳನ್ನು ಅಥವಾ ಒಂದು ಸಂಸ್ಕೃತಿಯ ವಿಕಾಸನದಲ್ಲಿ ಭೌಗೋಳಿಕ ಅಂಶಗಳು ಬಹುಮುಖ್ಯವಾದ ಪಾತ್ರ ವಹಿಸುತ್ತವೆ. ಪ್ರಾಚೀನ ಭಾರತವನ್ನು ಒಳಗೊಂಡ ಪ್ರಪಂಚದಲ್ಲೆಡೆಯಲ್ಲಿ ಮಾನವನ ನೆಲೆ ಮತ್ತು ನಾಗರಿಕತೆಗಳನ್ನು ನದಿ ಪಾತ್ರ ಅಥವಾ ನೀರಿನ ನೆಲೆಗಳ ಸಮೀಪದಲ್ಲಿ ಉಗಮ ಮತ್ತು ವಿಕಾಸ ಹೊಂದಿರುವುದು ಕಂಡುಬಂದಿರುತ್ತದೆ. ಪ್ರಸ್ತುತ ಅಧ್ಯಯನವು ವಿಜಯನಗರ ಸಾಮ್ರಾಜ್ಯದ ರಾಜಧಾನಿ ಹಂಪೆಯ ಪರಿಸರದಲ್ಲಿನ ಸ್ಮಾರಕಗಳಲ್ಲಿರುವ ಸಾಮಾಜಿಕ ಜೀವನವನ್ನು ಬಿಂಬಿಸುವ ಉದ್ದೇಶವನ್ನು ಒಳಗೊಂಡಿದೆ. ಇಲ್ಲಿನ ಭೌಗೋಳಿಕ ಪರಿಸರವು ವಿಜಯನಗರ ಸಾಮ್ರಾಜ್ಯದ ಏಳ್ಗೆಯಿಂದ ಅವನಿತಯವರೆಗೆ ಪ್ರತ್ಯಕ್ಷ ಮತ್ತು ಪರೋಕ್ಷವಾದ ಪರಿಣಾಮವನ್ನು ಬೀರುತ್ತಲೇ ಬಂದಿದೆ. ಆದ್ದರಿಂದ ಈ ಪರಿಸರದ ಭೌಗೋಳಿಕತೆಯನ್ನು ತಿಳಿಯುವುದು ಅವಶ್ಯಕವಾಗಿದೆ.

## ೨.೧. ಭೌಗೋಳಿಕ ಹಿನ್ನಲೆ

ಪ್ರಸ್ತುತ ಅಧ್ಯಯನದ ಆಯ್ಕೆಯ ಪ್ರದೇಶವೆಂದರೆ ಹಂಪಿಯ ಭೌಗೋಳಿಕ, ಪೌರಾಣಿಕ, ಚಾರಿತ್ರಿಕ ಮತ್ತು ಸಾಮಾಜಿಕ ಪ್ರಸಿದ್ಧಿ ಪಡೆದ ಸುಕ್ಷೇತ್ರ, ಹಂಪಿ ಒಂದು ಐತಿಹಾಸಿಕ ಸ್ಥಳವಾಗಿದ್ದು, ಇದು ತುಂಗಭದ್ರ ನದಿಯ ದಂಡೆಯ ಮೇಲೆ ಕಂಡುಬರುವ ನೆಲೆಯಾಗಿದೆ. ಜಾಗತಿಕ ಪರಂಪರೆಯಲ್ಲಿ ಮಹತ್ವದ ಸ್ಥಾನ ಪಡೆದುಕೊಂಡಿದೆ. "ದಕ್ಷಿಣ ಭಾರತದ ಇತಿಹಾಸದಲ್ಲಿ ತನ್ನ ಸಾಂಸ್ಕೃತಿಕ ವೈಭವದ ಎತ್ತರ ಶಿಖರವನ್ನೇರಿ ಮೆರೆದ ವಿಜಯನಗರ ಸಾಮ್ರಾಜ್ಯ ಮೂಲತಃ ಹುಟ್ಟಿ ಬೆಳೆದ ನೆಲದಲ್ಲಿ ಬೃಹತ್ ಏಕಶಿಲಾ ಬೆಟ್ಟಗಳು, ದೊಡ್ಡ ದೊಡ್ಡ ಮರದ ಗ್ರಾನೈಟ್ ಕಲ್ಲು ತುಂಡುಗಳ ರಾಶಿಯನ್ನು ಹೊದ್ದುಕೊಂಡಿರುವ ಬೆಟ್ಟ ಸಾಲುಗಳ ಪ್ರದೇಶವು ಇದಾಗಿದೆ."[೧] ಇಲ್ಲಿನ ನಿಸರ್ಗ ನಿರ್ಮಿತವಾದ ಬೃಹತ್ ಗವಿಗಳು, ಕಂದರಗಳು ಏಕಶಿಲಾ ಬೆಟ್ಟಗಳು, ಬಯಲು ಬಂಡೆಗಳೂ, ಕಡಿದಾದ ಇಳಿಜಾರುಗಳು ಇಲ್ಲಿನ ನಿಸರ್ಗ ಸೌಂದರ್ಯವನ್ನು ಮತ್ತಷ್ಟು ಹೆಚ್ಚಿಸಿವೆ. ಬೆಟ್ಟಗುಡ್ಡಗಳ ನಡುವೆ ನುಸುಳಿ ಹರಿಯುವ ತುಂಗಭದ್ರ ನದಿ ಈ ಪ್ರದೇಶಕ್ಕೆ ಮತ್ತೊಂದು ವರದಾನವೆನ್ನಬಹುದು. ತುಂಗಭದ್ರ ನದಿಯ ಎಡ-ಬಲ ದಂಡೆಗಳ

ಹಲವು ಸ್ಥಳಗಳಲ್ಲಿ ಆದಿಮ ಸಂಸ್ಕೃತಿಯ ನೆಲೆಗಳನ್ನು ಗುರುತಿಸಲಾಗಿದೆ ಹಾಗೂ ಹಲವಾರು ಸಾಕ್ಷ್ಯಾಧಾರಗಳು ಕಂಡುಬಂದಿದೆ. ಸಾಮಾಜಿಕ ಜೀವನದ ಹಂಪಿ ಇಲ್ಲಿನ ನೆಲೆಯಾಗಿದೆ. ಪುರಾಣ ಪುಣ್ಯ ಕತೆ, ಐತಿಹ್ಯ ಕಾವ್ಯ, ಮಹಾಕಾವ್ಯಗಳು, ಚಿತ್ರಕಲೆ, ಸಂಗೀತ, ಶಿಲ್ಪಕಲೆ, ಗಾರೆಶಿಲ್ಪ, ಸಾಹಿತ್ಯ ಇವುಗಳು ಭಿತ್ತಿ ಬೆಳೆಸಿವೆ. ಇಲ್ಲಿನ ಮೂಲ ದೈವ ವಿರೂಪಾಕ್ಷ ಜನಪದರಲ್ಲಿ, ಚಿತ್ರಕಲೆಯಲ್ಲಿ, ಶಿಲ್ಪಕಲೆಯಲ್ಲಿ ಮಹತ್ವದ ಸ್ಥಾನ ಪಡೆದುಕೊಂಡಿದೆ. "ಇಲ್ಲಿನ ಭೌಗೋಳಿಕ ಪರಿಸರವೂ ಸಹ ವಿವಿಧ ಸಮುದಾಯಗಳು ಈ ಪ್ರದೇಶದಲ್ಲಿ ನೆಲೆ ನಿಲ್ಲಲು ಮುಖ್ಯ ಕಾರಣವಾಗಿದೆ. ನದಿಬಯಲಿನ ಪ್ರದೇಶವಾದ್ದರಿಂದ ಪಶುಸಂಗೋಪನಾ ವೃತ್ತಿಯಲ್ಲಿ ಕುರುಬರು, ಗೊಲ್ಲರು ವಿಶೇಷವಾಗಿ ಈ ಪ್ರದೇಶದಲ್ಲಿ ಕಂಡುಬರುತ್ತಾರೆ."[೨] ಹೆಚ್ಚಾಗಿ ಬೇಟೆಯಾಡಲು ಅಡವಿಚಂಚರು, ಮ್ಯಾಸಬೇಡರು, ಹಕ್ಕಿಪಿಕ್ಕಿ, ಕೊರಚರು ಮುಂತಾದ ಬುಡಕಟ್ಟು ಸಮುದಾಯಗಳು ಈ ಪ್ರದೇಶದಲ್ಲಿ ನೆಲೆಸಿದ್ದಾರೆ.

ಸುಮಾರು ಏಳು ಶತಮಾನದ ಹಿಂದೆ ಬೆಟ್ಟಗುಡ್ಡದ ಈ ಭೌಗೋಳಿಕ ಪರಿಸರದಲ್ಲಿ ಒಂದಾನೊಂದು ದಿನ ಉಜ್ವಲ ಸಾಮ್ರಾಜ್ಯ ವೈಭವದ ಕೇಂದ್ರವು ಅವತರಿಸಬಹುದೆಂಬ ಭಾವನೆ, ಯಾರಿಗೂ ಸ್ವಪ್ನದಲ್ಲಿಯೂ ಹೊಳೆದಿರಲಾರದು. ಈ ಕಲ್ಲುಬಂಡೆಗಳು ಅನೇಕ ಶೌರ್ಯ, ಪ್ರತಾಪ ಹಾಗೂ ತ್ಯಾಗದ ಘಟನೆಗಳನ್ನು ಪ್ರಕಾಶಪಡಿಸಿಯೂ ಇವೆ, ಮರೆಸಿಯೂ ಇವೆ. ಇಲ್ಲಿನ ಅವಶೇಷಗಳ ಎಪ್ಪತ್ತು ಕಿಲೋಮೀಟರ್ ಚೌಕದ ವ್ಯಾಪ್ತಿಯು ಈಗ ನಮ್ಮ ಪಾಲಿಗೆ ವಿಜಯನಗರದ ಒಂದು ಬೃಹತ್ ಸ್ಮಾರಕಗಳ ಕಣಜವಾಗಿ ಉಳಿದಿದೆ. ಹಂಪಿಯಲ್ಲಿನ ಈ ದುರ್ಗದೇವಾಲಯದ ವಾತಾವರಣದಲ್ಲಿ ಇತಿಹಾಸವು ಅಂಕುರಿಸಿ, ಬೆಳೆದು ಬಹುಕಾಲ ರಾರಾಜಿಸಿ ಕ್ಷಣಮಾತ್ರದಲ್ಲಿ ಬಲಿಯಾಯಿತು. ಎರಡು ನೂರ ಮುವ್ವತ್ತು ವರ್ಷಗಳ ಸಾಮ್ರಾಜ್ಯ ವೈಭವದ ಕೇಂದ್ರವು ೧೫೬೫ರಲ್ಲಿ ಕೊನೆಗೊಂಡಿತು.

"ನಮಗೆ ಇಲ್ಲಿ ಕಾಣುವ ಸ್ಮಾರಕಗಳಲ್ಲಿ ದೇವಾಲಯಗಳು ಈ ಸುಂದರ ಕಲ್ಲು ಕಟ್ಟಡಗಳಲ್ಲಿ ಕೆಲವು ಕಿರಿದಾದವು. ಕೆಲವು ಸ್ವಲ್ಪ ದೊಡ್ಡವು ಮತ್ತು ಕೆಲವು ಬೃಹದಾಕಾರದವು."[೩] ಶೈವ, ಶಾಕ್ತ, ವೈಷ್ಣವ ಮತ್ತು ಜೈನ ಧರ್ಮಗಳಿಗೆ ಸೇರಿದ ದೇವಾಲಯಗಳು ಎಲ್ಲಾರಿಗು ರಾಜರ ಸಮಾನ ಆಶ್ರಯವಿತ್ತು. ಕೆಲವು ದೇವಾಲಯಗಳಲ್ಲಿ ಕಂಡುಬರುವ ಕೆತ್ತನೆಯ ಕೌಶಲ ಹತ್ತಾರು ಟನ್ನುಗಳಷ್ಟು ತೂಕದ ಕಲ್ಲು ತೊಲೆಗಳು, ಕಂಬಗಳು, ಭಾವಣಿಗೆ ಹಾಸಿರುವ ಅಗಾಧವಾದ ಚಪ್ಪಡಿಗಳು ಇವುಗಳನ್ನು ಮೇಲೇರಿಸಿ ಸ್ಥಳೋಚಿತವಾಗಿ ಜೋಡಿಸಿಟ್ಟಿರುವ ಗಜಸಹಾನ ಗುಡಿಯ ಸುತ್ತಲೂ ಕಟ್ಟಿರುವ ನೂರಾರು ಕಂಬಗಳು, ಮಸೀದಿ, ಪುಷ್ಕರಣಿಗಳು ಇವೆಲ್ಲವನ್ನು ನೋಡಿದರೆ, ಈಗಿನ ಕಾಲದ ಕಟ್ಟಡ ಶಿಲ್ಪಗಳನ್ನು ಒಂದಾನೊಂದು ಕಾಲದಲ್ಲಿ ಸತತವೂ ಬೆಳಗುತ್ತಿದ್ದ ನಂದಾ ದೀಪಗಳನ್ನು ನೋಡುವುದಾಗಲಿ, ಸುನಾದದಿಂದ ಮೊಳಗುತ್ತಿದ್ದ ಗಂಟೆ ನಗಾರಿ ನಾದ ಸ್ವರವು ಮೊದಲಾದ ವಾದ್ಯ ಸಮೂಹವನ್ನು ಕೇಳುವುದಾಗಲಿ ಈಗ ಸಾಧ್ಯವಿಲ್ಲ. ಆಗಿನ ಭಕ್ತಾದಿಗಳ ಸಂಭ್ರಮ, ಸಡಗರದ ಸ್ಥಾನದಲ್ಲಿ ಈಗ ಕುತೂಹಲ ಪ್ರೇರಿತವಾದ ಪ್ರವಾಸಿಗಳು ನಾನಾ ಕಡೆಗಳಿಂದ ಬಂದು ನೋಡಿ ಹೋಗುತ್ತಾರೆ ಮತ್ತು

ಆಶ್ಚರ್ಯ ಪಡುತ್ತಾರೆ. ಇತರ ಅನೇಕ ಪುರಾತನ ರಾಜಧಾನಿಗಳಂತೆ ಹಂಪಿಯ ಐತಿಹ್ಯವೂ ಇತಿಹಾಸದ ವಿಭಿನ್ನ ಅಂಗವಾಗಿ ಕಣ್ಮರೆಯಾಯಿತಲ್ಲ ಎಂದು ಕೆಲವು ನಿಟ್ಟುಸಿರು ಬಿಡುವುದು ಉಂಟು. ಭೀಕರ ದುರಂತಕ್ಕೆ ಸಿಕ್ಕಿ ನುಚ್ಚು ನೂರಾಗಿರುವ ಈ ವಿಜಯನಗರದ ಅವಶೇಷಗಳು, ಅವುಗಳ ಪರಿಸರ ವೈಶಿಷ್ಟ್ಯವೂ ಜನರ ಮನಸ್ಥಿತಿಯನ್ನು ಇನ್ನೂ ಆಕರ್ಷಿಸುತ್ತಲೇ ಇವೆ. ಹೊರದೇಶಗಳಿಂದ ಬಂದ ಆಗಿನ ಪ್ರಖ್ಯಾತ ಪ್ರವಾಸಿಗರ ಇಬ್ಬನ್‌ಬತೂತ, ಬರಾನಿ, ನಿಕೊಲೊಕಾಂಟಿ, ಅಬ್ದುಲ್‌ರಜಾಕ್, ಪೆರಿಷ್ವ, ಡೊಮಿಂಗೋ ಪೇಯಸ್ತಾ, ಫರನಾ ಓ ನ್ಯೂನಿಜ್, ಬರ್ಬ್ರೆಸಾ ಇವೆರಾ ಮೊದಲಾದವರು. ತಾವು ಕಂಡು ಕೇಳಿದ ವಿಜಯನಗರದ ವೈಭವವನ್ನು ಅದರ ಹಿರಿಮೆಯನ್ನು ತಮ್ಮ ವರದಿಗಳಲ್ಲಿ ಸ್ವಾರಸ್ಯವಾಗಿಯೂ, ವರ್ಣರಂಜಿತವಾಗಿಯೂ ಆಗಾಗ್ಗೆ ಉತ್ಪ್ರೇಕ್ಷೆಯಿಂದಲೂ ಉಲ್ಲೇಖಿಸಿದ್ದಾರೆ. ವಿಜಯನಗರ ತುಂಬಿ ತುಳುಕುವ ಅಂಗಡಿಯ ಸಾಲುಗಳು, ರಸ್ತೆ ಬದಿಯಲ್ಲಿ ತರಕಾರಿಗಳನ್ನು ಮಾರುವ ತರದಲ್ಲಿ ಸ್ವರ್ಣ ಕಾಲ ವರ್ತಕರು ಚಿನ್ನ, ವಜ್ರ ವೈಢೂರ್ಯ, ಪಚ್ಚೆ ಮತ್ತಿತರ ಮುತ್ತು ರತ್ನಗಳನ್ನು ನಿರ್ಭಯವಾಗಿ ಮಾರಾಟ ಮಾಡುವ ದೃಶ್ಯಗಳು ಅರಮನೆಯ ಆವರಣದಲ್ಲಿ ಓಡಾಡುವ ಹುರಿಮೀಸೆಯ ಸಶಸ್ತ್ರ ಭಟರುಗಳು, ಕುದುರೆ ಸವಾರರು, ಕಲಾಕಾರರು, ಸೇವಕ–ಸೇವಕಿಯರು ಹೀಗೆ ಅನೇಕ ಚಿತ್ರಣವನ್ನು ಕಂಡುಬರುತ್ತವೆ.

"ಈಗಿನ ಹಂಪಿಯ ಹಾಳುಬಿದ್ದಿರುವ ಒಂದು ಪುರಾತನ ಸ್ಥಳವಾಗಿದೆ. ಅದರ ಸ್ಮಾರಕಗಳಲ್ಲಿ ಅನೇಕ ಮತ್ತು ಬಹುವಿಧ ಈ ಅವಶೇಷಗಳಿಗೆ ಇಲ್ಲಿನ ಬೆಟ್ಟಗುಡ್ಡಗಳ ಪರಿಸರವೇ ವಿಶಿಷ್ಟವಾಗಿದೆ. ಇಲ್ಲಿನ ಬೋಳುಬಂಡೆಗಳ ವಿಚಿತ್ರ ಜೋಡಿಣಿಗಳನ್ನು ನೋಡಿದರೆ ಬಹುಶಃ ಹಿಂದಿನ ಕಾಲದಲ್ಲಿ ಆದಿಮಾನವ ನೆಲೆಸಿರುವುದು ಕಂಡುಬರುತ್ತದೆ."[೪] ದಕ್ಷಿಣ ಭಾರತದ ಇತಿಹಾಸದಲ್ಲಿ ಎಂದೂ ಕಾಣದ ರಾಜಕೀಯ ವಿಷಯದ ದುರಂತಗಳನ್ನು, ದೌರ್ಜನ್ಯಗಳನ್ನು ಅನುಭವಿಸಿದ ಜನತೆಯು ತನ್ನ ಸ್ವತಂತ್ರವನ್ನು, ಧರ್ಮ ಪರಂಪರೆಯನ್ನು ರಕ್ಷಿಸಿಕೊಂಡು ಬರಬೇಕೆಂಬ ಕ್ಷೇತ್ರದ ಸಂಕಲ್ಪವನ್ನು ಕಾರ್ಯಗತ ಮಾಡಿದ ವೀರಭೂಮಿ ಇದು. ಕೇವಲ ಕರ್ನಾಟಕಕ್ಕೆ ಮಾತ್ರ ಸೀಮಿತವಾಗಿರದೆ, "ಇಡೀ ದಕ್ಷಿಣ ಭಾರತದಲ್ಲಿ ವಿಧೇರ್ಯರ, ಫಿಡಕೆ ಪ್ರಭುತ್ವವನ್ನು ಶೌರ್ಯದಿಂದ ಕೊನೆಗಾಣಿಸಿ ಸುಮಾರು ಎರಡೂವರೆ ಶತಮಾನದವರೆಗೆ ಜನಸಾಮಾನ್ಯರಿಗೆ ಶಾಂತಿ, ಸಂರಕ್ಷಣೆ, ಕರ್ಮಭೂಮಿ ನಾಡುಗಳಲ್ಲಿ ತವರು ಮನೆ ಆಗಿದೆ."[೫]

ಹಂಪಿಯು ಕರ್ನಾಟಕದ ನಾಗರಿಕತೆ ತೊಟ್ಟಿಲಾಗಿ ರೂಪ ಪಡೆದಿರುವುದನ್ನು ಕಾಣಬಹುದಾಗಿದೆ. ತುಂಗಭದ್ರ ನದಿಯ ಎಡ ಹಾಗೂ ಬಲದಂಡೆಗಳ ಮೇಲೆ ಗುರುತುಗೊಂಡಿರುವ ಆದಿಮ ಸಂಸ್ಕೃತಿಯ ನೆಲೆಗಳು ಈ ಪ್ರದೇಶದಲ್ಲಿ ಮಾನವನು ಬದುಕಿ ಬಾಳಿದ ಪ್ರಾಚೀನತೆಯ ಕುರುಹುಗಳಾಗಿ ಕಂಡುಬರುವವು.

"ಹೀಗೆ ಹಂಪಿ ಪರಿಸರದ ಹೆಬ್ಬಂಡೆಗಳಲ್ಲಿ ಒಂದಾದ ಅಕ್ಕ–ತಂಗಿಯರ ಗುಂಡುಗಳು ಕಲ್ಲಿನ ಮೂಲಕ ಮಾನವೀಯ ಸಂಬಂಧಗಳನ್ನು ಬೆಸೆಯುವಂತಹ ಭಾರತೀಯ ಸಂಸ್ಕೃತಿಯ ಸಾರುವ

ಪ್ರತೀಕಗಳಾಗಿ ಕಂಡುಬರುತ್ತವೆ."[೬] ಇನ್ನೂ ಅನೇಕ ಸನ್ನಿವೇಶಗಳು ಒಳಗೊಂಡ ಹಂಪಿಯ ವಿಜಯನಗರ ಆದಿಮ ಸಂಸ್ಕೃತಿ, ಸಾಹಿತ್ಯ, ಜನಪದ, ಸಾಮಾಜಿಕ ಜೀವನದ ಚಿತ್ರಕಲೆ, ಶಿಲ್ಪಕಲೆ, ಗಾರೆಶಿಲ್ಪಗಳು ಹೀಗೆ ವಿಜಯನಗರ ಸಾಮ್ರಾಜ್ಯದ ಅಂಶಗಳ ಸನ್ನಿವೇಶಗಳು ಸಾರುವ ಪ್ರತೀಕಗಳಾಗಿ ಕಂಡುಬರುತ್ತವೆ.

## ೨.೨. ಪೌರಾಣಿಕ ಹಿನ್ನೆಲೆ

ಹಂಪಿಯು ಪ್ರಾಗೈತಿಹಾಸಿಕ ಕಾಲದಿಂದಲೇ ಜನವಸತಿಯನ್ನು ಆಕರ್ಷಿಸುವಂತ ಪರಿಸರ ಅಥವಾ ತಾಣವಾಗಿತ್ತಲ್ಲದೆ. "ಪುರಾಣ ಹಾಗೂ ಪ್ರಾಚೀನ ಮಹಾಕಾವ್ಯಗಳ ಕಾಲದಲ್ಲಿಯೂ ಅದು ಒಂದು ಪ್ರಮುಖವಾದ ಧಾರ್ಮಿಕ ಹಾಗೂ ಪವಿತ್ರ ಕ್ಷೇತ್ರವಾಗಿ ರೂಪುಗೊಂಡು ಪ್ರಸಿದ್ಧಿಗೆ ಬರುವಲ್ಲಿ ಸಫಲವಾಯಿತೆಂಬ ವಿಷಯವು ಸ್ಕಂದ ಪುರಾಣಂತರ್ಗತವಾದ ಪಂಪಮಹಾತ್ಮೆ, ರಾಮಾಯಣದ ಕಿಷ್ಕಿಂದ ಕಾಂಡ ಮುಂತಾದ ಪ್ರಾಚೀನ ಸಾಹಿತ್ಯಾಧಾರಗಳಿಂದ ವೇದ್ಯವಾಗಿರುತ್ತದೆ. "ಪುರಾಣ ಕಾಲದಲ್ಲಿ ಹಂಪೆಯು ಪಂಪಾಕ್ಷೇತ್ರವೆಂದು ಕರೆಯಲ್ಪಟ್ಟಿದೆ."[೭] ತುಂಗಭದ್ರ ನದಿಯ ಇನ್ನೊಂದು ಹೆಸರು ಪಂಪಾ ಸರೋವರವಾಗಿದೆ. ಇದು ಅನೇಕ ಋಷಿಗಳ ತಪೋಭೂಮಿಯಾಗಿತ್ತು. ಹಿಮಾಲಯ ಪರ್ವತದಲ್ಲಿ ತಪೋನಿರತರಾಗಿದ್ದ ಅತ್ರಿ, ಭಾರದ್ವಾಜ, ವಿಶ್ವಾಮಿತ್ರ, ಗೌತಮ, ಜಮದಗ್ನಿ ಮತ್ತು ವಶಿಷ್ಠ ಈ ಸಪ್ತರ್ಷಿಗಳು ಪಂಪಾಕ್ಷೇತ್ರದ ಮಹಿಮೆಯನ್ನು ಕೇಳಿ, ಇಲ್ಲಿಗೆ ಬಂದರು. ಮಾತಂಗ ಋಷಿ ಉಗ್ರ ತಪಸ್ಸನ್ನಾಚರಿಸಿ ಶಿವನನ್ನು ಒಲಿಸಿಕೊಂಡು ಮಾತಂಗ ಪರ್ವತವಾಗಿದೆ. ಇಂದಿನ ಹಂಪೆ ಮತ್ತು ಆನೆಗುಂದಿಗಳ ಮಧ್ಯ ಭಾಗದ ಪ್ರದೇಶವು ವಾಲಿ–ಸುಗ್ರೀವರ ವಾಸಸ್ಥಾನವಾಗಿತ್ತು. ಅನೇಕ ಪುರಾಣಗಳ ರಾವಣನು ಸೀತೆಯನ್ನು ಅಪಹರಿಸಿದಾಗ ಅವಳ ಸೆರಗು ಕೆಳಗೆ ಎಳೆಯುತ್ತ ಹೋಯಿತು. ಪುರಂದರದಾಸರ ಮಂಟಪದ ಕಡೆಗೆ ಹೋಗುವ ದಾರಿಯಲ್ಲಿ ದಪ್ಪದ ಬಿಳಿ ಬಣ್ಣದ ಪಟ್ಟಿಯಿಂದ ಗೋಚರವಾಗಿ ಕಾಣಲಾಗಿತ್ತು.

ಜಗತ್ತಿನಲ್ಲಿಯೇ ಪ್ರಸಿದ್ಧಿಯಾದ ನಗರವಾಗಿ ಮೆರೆದ ಹಂಪಿಯು ಪ್ರಾಚೀನ ಕಾಲದಿಂದಲೂ ವಿರೂಪಾಕ್ಷ ಪಾದ, ವಿರೂಪಾಕ್ಷ ತೀರ್ಥ, ವಿರೂಪಾಕ್ಷಯ ಪಟ್ಟ, ಹೊಸ ಪಟ್ಟಣ, ವಿದ್ಯಾ ನಗರವಾಗಿ ವಿಜಯನಗರವಾಗಿದ್ದು, ಸಾಧು ಸಂತರು, ಋಷಿಗಳು ಮತ್ತು ವೀರರು, ಸಾಹಿತ್ಯ, ಸಂಗೀತ, ನೃತ್ಯಗಳು, ಚಿತ್ರಕಲೆ, ಶಿಲ್ಪಕಲೆಗಳು ಹಾಗೂ ಇನ್ನೂ ಅನೇಕ ರೀತಿಯ ಸಂಸ್ಕೃತಿಯಲ್ಲಿ ಆದ್ಯತೆ ಹೊಂದಿದೆ. ಅಮೂಲ್ಯ ಸಂಪತ್ತುಗಳಾದ ಬೆಟ್ಟ–ಗುಡ್ಡ, ಕಾಡು–ಮೇಡು, ನದಿ, ಮರ–ಗಿಡಗಳು, ಪರ್ವತಗಳು, ಸರೋವರಗಳು ಪ್ರಕೃತಿಯು ನೀಡಿರುವ ವರದಾನಗಳಾಗಿದ್ದು."[೮] ಇಲ್ಲಿಯ ಪ್ರತಿಯೊಂದು ಕಲ್ಲು ಸಹ ತನ್ನದೇ ಆದ ಒಂದೊಂದು ಕಥೆಯನ್ನು ಸಾರುತ್ತದೆ. ಹಿಂದಿನಿಂದಲೂ ಇಂದಿನ ವರೆಗೆ ದೇಶ–ವಿದೇಶಗಳ ಪ್ರವಾಸಿಗಳನ್ನ ಆಕರ್ಷಿಸುತ್ತಿರುವ ಹಂಪಿಯು ತನ್ನದೇ ಆದ ವಿಶಿಷ ತೆಯನ್ನ ಹೊಂದಿದೆ. "ಪುರಾಣದ ಪ್ರಕಾರ ಪಂಪಾಕ್ಷೇತ್ರ ವಿರೂಪಾಕ್ಷನ ಮತ್ತೊಂದು ಹೆಸರು. ಜನಪದಗಳಂತೆ ಹಂಪಿಯನ್ನು ಆದಿ ದೇವತೆಯಾಗಿರುವ ಭುವನೇಶ್ವರಿಯನ್ನು ಹಂಪಮ್ಮ ಎಂತಲೂ ವಿರೂಪಾಕ್ಷನಿಗೆ ಪಂಪಾಪತಿ

ಎನ್ನುವುದುಂಟು. ಬಳ್ಳಾರಿ ಜಿಲ್ಲೆಯ ಬಹುತೇಕ ಮನೆಗಳ ಕುಲದೇವತೆಗಳಾಗಿರುವುದರಿಂದ ಹುಟ್ಟಿದ ಮಕ್ಕಳಿಗೆ ಹಂಪಮ್ಮ, ಪಂಪಾಪತಿಯೆಂದು ತೊಟ್ಟಿಲು ಹೆಸರು ಇಡುವ ರೂಢಿ ಈ ಭಾಗದಲ್ಲಿದೆ. ಈ ಅದಿದೇವತೆಗಳ ವಿವಾಹ ನಿಶ್ಚಯ ಕಾರ್ಯಕ್ಕೆ ಫಲ ಪೂಜೆ ಎಂದು ಕರೆಯುತ್ತಾರೆ ಇದು ಜನವರಿ ತಿಂಗಳಲ್ಲಿ ಬರುವ ಪೂರ್ವ ಹುಣ್ಣಿಮೆ, ದಿನ ಈ ಧಾರ್ಮಿಕ ಕಾರ್ಯ ನೆರವೇರುತ್ತದೆ."[೯]

ಏಪ್ರಿಲ್ ತಿಂಗಳಲ್ಲಿ ನಡೆಯುವ ಇವರಿಬ್ಬರ ವಿವಾಹ ಮಹೋತ್ಸವವೇ ಹಂಪಿ ಜಾತ್ರೆ, ಈ ಜಾತ್ರೆಯಲ್ಲಿ ಹಂಪಮ್ಮ, ಪಂಪಾಪತಿ (ವಿರೂಪಾಕ್ಷ, ಭುವನೇಶ್ವರಿ) ಜೋಡಿ ತೇರುಗಳನ್ನು ಒಟ್ಟಿಗೆ ಎಳೆಯುತ್ತಾರೆ. ಈ ಜಾತ್ರೆಯು ಬಳ್ಳಾರಿ ಜಿಲ್ಲೆಯ ಅತೀ ದೊಡ್ಡ ಜಾತ್ರೆಯಾಗಿದ್ದು ಈ ಜಾತ್ರೆಗೆ ಆಂಧ್ರಪ್ರದೇಶ, ಗೋವಾ, ತಮಿಳುನಾಡು, ಮಹಾರಾಷ್ಟ್ರದಂತಹ ಅನೇಕ ರಾಜ್ಯಗಳ ಜನರು ಜಾತ್ರೆಗೆ ಆಗಮಿಸುತ್ತಾರೆ.

ತುಂಗಭದ್ರ ನದಿ ದಂಡೆ ಮೇಲಿನ ಈ ಪವಿತ್ರ ಭೂಮಿ ಅನೇಕ ರಸಋಷಿಗಳ ತಪೋದ್ಯಾನವಾದ ಈ ಸ್ಥಳದಲ್ಲಿ ಬ್ರಹ್ಮರ್ಷಿಯಾದ ಸೌಂದರ್ಯವತಿಯೂ, ಶಿವನನ್ನು ವರಿಸಿದ ಸ್ಥಳಕ್ಕೆ ಹೇಮಕೂಟ ಎಂದು ಹೇಳುವುದುಂಟು ಎಲ್ಲಕ್ಕಿಂತ ಮಿಗಿಲಾಗಿ ಹಂಪಿಯನ್ನ 'ದಕ್ಷಿಣ ಕಾಶಿ' ಎಂದು ಕರೆಯುತ್ತಾರೆ. ಕೇವಲ ಕಾಶಿಗೆ ಹೋಗಿಬಂದರೆ ಸಾಲದು, ದಕ್ಷಿಣ ಕಾಶಿಗೆ ಹೋದರೆ ಮುಕ್ತಿ ದೊರೆಯುವ್ಯದೆಂಬುದು ಜನಪದರ ಮಾತಾಗಿದೆ. ಹೇಮಕೂಟದ ಮೇಲೆ ಅವಧೂತರ ಮಂಟಪವಿದ್ದು, ಇಲ್ಲಿ ಶ್ರೀರಾಮ ಅವಧೂತರು ತಪಸ್ಸು ಆಚರಿಸಿದ್ದರು ಎಂದು ಪುರಾಣ ಕಥೆಗಳಿಂದ ತಿಳಿದುಬರುತ್ತದೆ.ಇಲ್ಲಿ ಪ್ರತಿ ಶಿವರಾತ್ರಿಯಂದು ಜಾಗರಣೆ, ಭಜನೆ, ಅನ್ನಸಂತರ್ಪಣೆ, ಇತ್ಯಾದಿ ಧಾರ್ಮಿಕ ಕಾರ್ಯಗಳು ನಡೆಯುತ್ತವೆ. ಇಲ್ಲಿ ಯಾವುದೇ ಧರ್ಮ, ವರ್ಣ, ವರ್ಗ, ಜಾತಿ ಸೂತಕಗಳಲ್ಲಿದೆ ಭಾವೈಕ್ಯದಿಂದ ಭಜನೆ ಮಾಡುತ್ತಾರೆ.

ಇನ್ನೂ ರಾಮಾಯಣದ ಕಾಲವನ್ನು ನೋಡುವುದಾದರೆ ವಾಲೀ–ಸುಗ್ರೀವರ ನಾಡು ಇಂದಿನ ಹಂಪೆ, ಆನೆಗುಂದಿಗಳ ನಡುವಿನ ಪ್ರದೇಶವಾದ 'ಕಿಷ್ಕಿಂದೆ' ರಾಜ್ಯವೆಂದು ಹೇಳಲಾಗಿದೆ. ರಾವಣ ಮಾರೀಚನ ವೇಷದಲ್ಲಿ ಅಪಹರಿಸಿಕೊಂಡು ಹೋಗುವಾಗ ಸೀತೆಯ ಸೀರೆಯ ಸೆರಗು ಜಾರಿ ಬಂಡೆಗಲ್ಲಿನ ಮೇಲೆ ಬೀಳುತ್ತ ಹೋಯಿತು. ಈ ಸೆರಗಿನ ಗುರುತಿನ ಜಾಡು ಹಿಡಿದು ಸೀತೆಯ ಅನ್ವೇಷಣೆಗೆ ತೆರಳಿದ ರಾಮ, ಲಕ್ಷ್ಮಣರಿಗೆ ಸೀತೆಯ ಸೆರಗಿನ ದಾರಿ ಸಹಕಾರಿಯಾಯಿತ್ತೆಂದು ತಿಳಿದುಬರುತ್ತದೆ. ಸ್ವಲ್ಪ ಮುಂದೆ ಹೋದರೆ ಏಡಿಯಗುದ್ದು (ಏಡಿಯ ವಾಸಸ್ಥಾನ) ಎಂಬ ಗವಿ ಅಗುತ್ತದೆ, ಕಲಿಯುಗದ ಆರಂಭ ಅಣ್ಣ ತಂಗಿಯರಿಂದಲೇ ಆಗಿದೆಯಂತೆ. ಅನಾಥರಾದ ಅಣ್ಣ, ತಂಗಿ ಏಡಿಯ ಗುದ್ದುವಿನಲ್ಲಿ ವಾಸವಾಗಿರುವಾಗ ಮೊದಲು ಹೊನ್ನಿನ ಮಳೆ ಸುರಿದಾಗ ಹೊನ್ನಿನ ರಾಶಿಯನ್ನು ರಾಶಿ–ರಾಶಿ ಬಳಿದುಕೊಂಡರು. ನಂತರ ಬೆಂಕಿಯ ಮಳೆ ಸುರಿಯಿತು. ಆಗ ಎಲ್ಲಾ ಸುಟ್ಟು ಬೂದಿಯಾಯಿತು. ಈ ಎರಡು ಘಟನೆಗಳು ಅರಿವು ಅಣ್ಣ, ತಂಗಿಯವರ ಗಮನಕ್ಕೆ

ಇರಲಿಲ್ಲವಂತೆ. ಎಲ್ಲಿ ನೋಡಿದರು ಬಯಲೇ ಬಯಲು. ಶಿವ ಹಾಗೂ ಪಾರ್ವತಿ ನಂದಿಯ ಮೇಲೆ ಪ್ರಪಂಚ ಪರ್ಯಾಟನೆ ತೆರಳುವಾಗ ಈ ಅಣ್ಣ ತಂಗಿಯರನ್ನು ನೋಡಿ ಧರೆಗಿಳಿದರು. ಇವರಿಬ್ಬರ ಬಳಿ ಬಂದು ನೀವು ಯಾರೆಂದು ಕೇಳಿದಾಗ ಅಣ್ಣ-ತಂಗಿಯವರೆಂದು ಹೇಳಿದರು. ಶಿವ ಪಾರ್ವತಿಯರು ತಮ್ಮ ಕೈಯಿಂದ ಮಟ್ಟಕ್ಕೆ ಪುಟ್ಟಿಯಲ್ಲಿ ಹೆಣ್ಣಿನ ಎಡಗಾಲು, ಗಂಡಿನ ಬಲಗಾಲು ಇಡಿಸಿ ವಿವಾಹ ಮಾಡಿದಾಗಿ ಸೂರ್ಯಚಂದ್ರರು, ದೇವಾದಿದೇವತೆಗಳು ಹೂಮಳೆ ಸುರಿಸಿ ಕಲಿಯುಗದ ಆರಂಭಕ್ಕೆ ಆಶಿರ್ವಾದ ಮಾಡಿದರೆಂದು ಇಲ್ಲಿನ ಜನಪದರು ಕಥೆ ಹೇಳುತ್ತಾರೆ.

ಇನ್ನೂ ಇತಿಹಾಸದತ್ತ ಇಣುಕು ನೋಟ ಹರಿಸಿದಾಗ “ಹಂಪಿಯನ್ನು ಸಂಗಮ, ಸಾಳುವ, ತುಳುವ, ಅರವೀಡು ವಂಶಗಳು ಆಳಿ ತಮ್ಮದೇ ಆದ ಕಾಣಿಕೆಗಳನ್ನು ನೀಡಿವೆ.”[೧೦] ಹಾಗೆಯೇ ಹಂಪಿಯ ಪರಿಸರ, ಸ್ಮಾರಕಗಳು ಪೌರಾಣಿಕ ಹಿನ್ನೆಲೆಯ ಇನ್ನೊಂದು ಸನ್ನಿವೇಶವು ಮಾತಂಗ, ಒಬ್ಬ ಶೂದ್ರ ಋಷಿಮುನಿ ಈ ಋಷಿ ಕಠಿಣವಾದ ತಪಸ್ಸನ್ನು ಮಾಡಿ ಶಿವನ ಒಲುಮೆಗೆ ಪಾತ್ರನಾಗಿ ಆ ಮಾತಿಗೆ ಶಿವ ಒಬ್ಬ ಮೂಕ ಮಗ ಹುಟ್ಟುವನೆಂದು ಹೇಳಿದಾಗ ಮುನೀಶ್ವರ ಅವರು ಬೇಡಿ ಮತ್ಸ್ಯ, ಪಾರ್ವತಿಯಂತಹ ಮಗಳು ಹುಟ್ಟಿ ಆ ಮಗಳು ಯೌವ್ವನಕ್ಕೆ ಬಂದಾಗ ನೀನೆ ಅವಳಿಗೆ ಗಂಡನಾಗಬೇಕೆಂದು ವರ ಬೇಡಿದನು. ನೀಡಿದ ವರ ಫಲಿತವಾಗಿ ಮಾತಂಗ ಮುನಿಗೆ ರೂಪ ಲಾವಣ್ಯವತಿಯಾದ ಮಗಳು ಹುಟ್ಟಿದಳು.

ಅವಳೇ ಮಾತಂಗ ಮುನಿಯ ಮಗಳು ಮಾತಂಗಿ. ಇವಳನ್ನು ಕೊಟ್ಟ ಮಾತಿನಂತೆ ಶಿವ ಮದುವೆಯಾಗುತ್ತಾನೆ. ಹಾಗಾಗಿ ಮಾತಂಗ ಪರ್ವತ ಮೇಲೆ ಶಿವ ಮಾತಂಗಿ ದೇವಾಲಯ ಮತ್ತು ಮಾತಂಗಿ ಋಷಿಮುನಿಯ ಮೂರ್ತಿ ಕೂಡ ಕಂಡುಬರುತ್ತದೆ.

“ವಿಜಯನಗರ ಸಾಮ್ರಾಜ್ಯದ ರಾಜಧಾನಿಯಾಗಿ ಮೆರೆದ ಹಂಪಿಯು ಅದಕ್ಕೂ ಮುಂಚೆ ಅನೇಕ ಶತಮಾನಗಳ ಕಾಲ ದಕ್ಷಿಣ ಭಾರತದ ಕೆಲವೇ ಪ್ರಸಿದ್ಧ ತೀರ್ಥ ಕ್ಷೇತ್ರಗಳಲ್ಲಿ ಒಂದಾಗಿ ಅರಸರನ್ನು, ಸಾಮಂತರನ್ನು, ಭಕ್ತ ಜನರನ್ನು ಆಕರ್ಷಿಸುತ್ತಲೇ.”[೧೧] ಇದೆ. ಈ ಸಾಮ್ರಾಜ್ಯ ಸ್ಥಾಪನೆಗೆ ಮೊದಲೇ ಹಂಪಿ ರಾಜಕೀಯ, ಸಾಂಸ್ಕೃತಿಕ, ಧಾರ್ಮಿಕ, ಕಲೆ, ಚಿತ್ರಗಳ, ಶಿಲ್ಪಕಲೆಗಳು ರಾಮಾಯಣ, ಮಹಾಭಾರತ ಇನ್ನೂ ಅನೇಕ ಸಾಹಿತ್ಯ ಕ್ಷೇತ್ರಗಳಲ್ಲಿ ವಿಶಿಷ್ಟ ಮತ್ತು ಮಹತ್ವ ಸ್ಥಾನ ಪಡೆದಿವೆ.

ಹಂಪಿಯು ಉತ್ತರ ಭಾರತವನ್ನು ತನ್ನ ಕಪಿಮುಷ್ಟಿಯಲ್ಲಿರಿಸಿಕೊಂಡಿದೆ. ಪರಕೀಯರ ಸಂಸ್ಕೃತಿ ತನ್ನ ಕಬಂಧ ಬಾಹುಗಳನ್ನು ದಕ್ಷಿಣ ಭಾರತದತ್ತ ಚಾಚುತ್ತಿದ್ದಾಗ ಅದನ್ನು ತನ್ನ ಶಕ್ತಿ ಸಾಮರ್ಥ್ಯಗಳ ಮೂಲಕ ಸುಮಾರು ಎರಡೂವರೆ ಶತಮಾನಗಳುದ್ದಕ್ಕೂ ತಡೆಗಟ್ಟಿ ಅಳಿದು ಹೋಗಬಹುದಾಗಿದ್ದ ನಮ್ಮ ಸಂಸ್ಕೃತಿಯನ್ನು ಉಳಿಸಲು, ಬೆಳೆಸಲು ದಾರಿ ದೀಪವಾಗಿದೆ. ಕಲ್ಯಾಣ ಚಾಲುಕ್ಯರ ಪತನ ನಂತರ ವಿಶಾಲವಾದ ವಿಜಯನಗರ ಸಾಮ್ರಾಜ್ಯ ದಕ್ಷಿಣದ ಮೂರು ಮುಖ್ಯ ಅರಸರ ಮನೆತನಗಳಾದ ಹೊಯ್ಸಳ, ಸೇವುಣ, ಕಾಕತೀಯರಲ್ಲಿ ಹರಿದು ಹಂಚಿ ಹೋಗಿತ್ತು.

ಪ್ರಸ್ತುತ ಹಂಪಿಯಲ್ಲಿ ವೀಕ್ಷಿಸುತ್ತಿರುವ ಪ್ರಮುಖ ಸ್ಮಾರಕಗಳೇ ಈ ದೇವಾಲಯಗಳು, ಶೈವ, ವೈಷ್ಣವ ಸೇರಿದಂತೆ ಪ್ರಮುಖ ಮತಗಳ ಅನುಯಾಯಿಗಳಿಗೆ ಪ್ರತ್ಯೇಕ ದೇವಾಲಯಗಳೇ ಇಲ್ಲಿ ನಿರ್ಮಾಣಗೊಂಡಿರುವುದು ಪೌರಾಣಿಕ ವಿಶೇಷವಾಗಿದೆ.

## ೨.೩. ಚಾರಿತ್ರಿಕ ಹಿನ್ನೆಲೆ

“ಹಂಪೆಯು ಕ್ರಿ.ಶ.೧ ಮತ್ತು ೨ನೇ ಶತಮಾನದಲ್ಲಿ ಬೌದ್ಧರ ನೆಲೆಯಾಗಿತ್ತೆಂದು ತರ್ಕಿಸಲಾಗಿದೆ. ೧೯೭೫–೭೬ರ ಸಾಲಿನಲ್ಲಿ ಭಾರತೀಯ ಪುರಾತತ್ವ ಸರ್ವೇಕ್ಷಣಾ ಇಲಾಖೆಯವರು ಹಂಪಿಯ ಪ್ರದೇಶದಲ್ಲಿ ಉತ್ಖನನವನ್ನು ಕೈಗೊಂಡ ಸಮಯದಲ್ಲಿ ಒಂದು ಬ್ರಾಹ್ಮಿ ಲಿಪಿ ಇರುವ ಶಿಲಾಶಾಸನವು ದೊರೆಯಿತು.”[೧೨] ಇದು ಒಡೆದು ಹೋಗಿರುವ ಶಾಸನದ ಕಲ್ಲಿನ ಒಂದು ಚಿಕ್ಕ ಭಾಗವಾಗಿದ್ದರೂ ಸಹ ಹಂಪಿಯ ಪೂರ್ವ ಚರಿತ್ರೆಯ ಮೇಲೆ ಹೊಸ ಬೆಳಕನ್ನು ಬೀರುವಂತ ಪ್ರಮುಖ ವಿಷಯವಿದೆ. ಈ ಬ್ರಾಹ್ಮಿ ಲಿಪಿಯ ಶಾಸನವನ್ನು ತಿಳಿಹಸಿರು ಬಣ್ಣದ ಸುಣ್ಣದ ಕಲ್ಲಿನ ಮೇಲೆ ಕೆತ್ತಲಾಗಿದೆ. ಈಗ ಒಟ್ಟಿನಲ್ಲಿ ಕಾಣಬರುವುದು ಎಂಟು ಅಕ್ಷರಗಳು ಮಾತ್ರ, ಮೊದಲನೇ ಸಾಲಿನಲ್ಲಿ ಆರು ಅದು ತ–ರ–ಸ–ಪು–ತ–ನ ಎಂದಿದ್ದು ಎರಡನೇ ಸಾಲಿನಲ್ಲಿ ದಾ–ನಂ– ಎಂದು ಕೆತ್ತಲಾಗಿದೆ. ಇದು ಹಂಪಿಯಲ್ಲಿ ಪ್ರಪ್ರಥಮವಾಗಿ ದೊರೆತ ಬ್ರಾಹ್ಮಿ ಲಿಪಿ ಶಾಸನವಾಗಿರುವುದಲ್ಲದೆ ಏಕೈಕವಾದುದಾಗಿದೆ. ಈ ಶಾಸನದಲ್ಲಿ ಬರೆಯಲಾಗಿರುವ ಬ್ರಾಹ್ಮಿ ಲಿಪಿ ಶೈಲಿಯ ಶಾಸನಗಳು ಆಂಧ್ರದ ಬೌದ್ಧ ಕಲಾಕೇಂದ್ರಗಳಾದ ನಾಗಾರ್ಜುನಕೊಂಡ, ಅಮರಾವತಿ ಮುಂತಾದ ಸ್ಥಳಗಳಲ್ಲಿ ದೊರೆಯುತ್ತವೆ. ಶಾಸನ ಕೆತ್ತನೆಗೆ ಬಳಸಿರುವ ತಿಳಿಹಸಿರು ಸುಣ್ಣದಕಲ್ಲು ಆಂಧ್ರದ ಫಲನಾಮ (ಈಗಿನ ಗುಂಟೂರು ಜಿಲ್ಲಾ ಪ್ರದೇಶ) ಭಾಗದಲ್ಲಿ ವಿಫಲವಾಗಿ ದೊರೆಯುತ್ತದೆ. ಈ ಎಲ್ಲಾ ಕಾರಣಗಳಿಂದ ಆಂಧ್ರದ ಬೌದ್ಧರು ತಮ್ಮ ಉಪಯೋಗಾರ್ಥವಾಗಿ ಹಾಗೂ ಮತ ಪ್ರಚಾರಾರ್ಥವಾಗಿ ಚಿಕ್ಕ ಪ್ರಮಾಣದಲ್ಲಿ ಬಂದು ಬೌದ್ಧ ಸ್ತೂಪಗಳನ್ನು, ವಿಹಾರಗಳನ್ನು ಮತ್ತು ಚೈತ್ಯ ಗೃಹಗಳನ್ನು ಕಟ್ಟಿಕೊಂಡಿರಬೇಕು. ಹೀಗೆ ಕ್ರಿಸ್ತಶಕ ಆರಂಭದಲ್ಲಿ “ಹಂಪಿಯು ಬಹು ಮುಖ್ಯವಲ್ಲದಿದ್ದರೂ ಒಂದು ಗಣನೀಯ ಬೌದ್ಧ ಮತಾನುಯಾಯಿಗಳ ಕೇಂದ್ರವಾಗಿತ್ತೆಂದು ತರ್ಕಿಸಬಹುದಾಗಿದೆ.”[೧೩]

ಇದರ ನಂತರ ಹಂಪಿಯು ಬಾದಾಮಿ ಚಾಲುಕ್ಯ, ರಾಷ್ಟ್ರಕೂಟ, ಕಲ್ಯಾಣ ಚಾಲುಕ್ಯ ಮತ್ತು ನೊಳಂಬರು, ಸಿಂಧರು, ಹೊಯ್ಸಳರು, ಹೊಸಮಲೆದುರ್ಗ, ಕುಮ್ಮಟದುರ್ಗದ ಅರಸರು ಹಾಗೂ ವಿಜಯನಗರದ ಅರಸರು ಇವೇ ಮೊದಲಾದ ರಾಜವಂಶೀಯರ ಆಳ್ವಿಕೆಗೆ ಒಳಪಟ್ಟಿದುದು ಎಂದು ತಿಳಿದುಬರುತ್ತದೆ.

### ಬಾದಾಮಿ ಚಾಲುಕ್ಯರು

ಬಾದಾಮಿ ಚಾಲುಕ್ಯರ ಆಳ್ವಿಕೆಗೆ ಈ ಪ್ರದೇಶ ಸೇರಿತ್ತೆನ್ನುವುದರ ಬಗ್ಗೆ ಯಾವುದೇ ಅನುಮಾನಗಳಿಲ್ಲವಾದರೂ ಅವರದೆಂದು ಹೇಳಬಹುದಾದ ಶಾಸನಗಳು ಯಾವುವು ಹಂಪಿಯ

ಪರಿಸರದಲ್ಲಿ ದೊರೆತಿಲ್ಲ. ಆದರೆ "ಬಾದಾಮಿ ಚಾಲುಕ್ಯ ವಂಶದ ಅರಸ ವಿನಯಾದಿತ್ಯ–ಸತ್ಯಾಶ್ರಯನ ಆಳ್ವಿಕೆಯ ಕಾಲದಲ್ಲಿ (ಕ್ರಿ.ಶ.೬೮೧–೬೯೬) ಆತನ ಮಂತ್ರಿ ಮತ್ತು ಸಂಧಿಗ್ರಹಿಗಳಲ್ಲಿ ಒಬ್ಬನಾದ ರಾಮಪುಣ್ಯಲ್ಲಭ ಎಂಬುವವನಿಂದ ಕ್ರಿ.ಶ. ೬೮೯ರಲ್ಲಿ ಹೊರಡಿಸಲಾದ ತಾಮ್ರಪಟ ಶಾಸನದಲ್ಲಿ ಹಂಪಿಯ ಅಥವಾ ಪರಿಪಾತದ ಉಲ್ಲೇಖ ಬರುತ್ತದೆ. ಇದು ಸಂಸ್ಕೃತ ಭಾಷೆಯಲ್ಲಿದೆ."[೧೪]

ಹಂಪಿಯ ವಿರೂಪಾಕ್ಷ ದೇವಾಲಯವನ್ನು ಮರಳುಗಲ್ಲಿನಿಂದ ಕಟ್ಟಿದ್ದು, ಇತರ ದೇವಾಲಯಗಳಿಗಿಂತ ಇದು ಭಿನ್ನವಾಗಿದೆ. ದೇವಾಲಯವು ಅಧಿಷ್ಠಾನದಿಂದ ಸ್ತೂಪದವರೆಗೂ ಸುಮಾರು ಇಪ್ಪತ್ತೈದು ಅಡಿ ಎತ್ತರವಿದೆ. ದೇವಾಲಯವು ದ್ವಿದಳವನ್ನು ಹೊಂದಿರುವುದು. ಈ ದೇವಾಲಯದಲ್ಲಿ ಗರ್ಭಗೃಹ ಮತ್ತು ಅಂತರಾಳ ಮಾತ್ರ ಮೂಲರೂಪದಲ್ಲಿ ಉಳಿದಿದ್ದು, ಮುಂದಿನ ನವರಂಗ ಭಾಗ ವಿಜಯನಗರ ಕಾಲದಲ್ಲಿ ಪೂರ್ಣವಾಗಿ ಗುರುತಿಸಲಾಗದಷ್ಟು ಬದಲಾಗಿದೆ. ಇದರ ರಚನೆ ಬಳಸಿರುವ ಮಾಧ್ಯಮದಿಂದ ಅಧಿಷ್ಠಾನದ ಮಾದರಿ ದೇವಾಲಯದ ರೀತಿ, ಎತ್ತರ, ಒಳಗಿನ ಸುರುಳಿ (ತರಂಗಗಳು) ಮುಂತಾದ ವಿವರಗಳಿಂದ ಈ ದೇವಾಲಯವನ್ನು ಬಾದಾಮಿ ಚಾಲುಕ್ಯರ ಕಾಲಕ್ಕೆ ಅಂದರೆ ಸುಮಾರು ಎಂಟನೆಯ ಶತಮಾನದ ಆರಂಭ ಕಾಲಕ್ಕೆ ಸೇರಿಸಬಹುದಾಗಿದೆಯೆಂದು ವಿದ್ವಾಂಸರ ಅಭಿಪ್ರಾಯವಾಗಿದೆ. ಈ ಎಲ್ಲಾ ಕಾರಣಗಳಿಂದಾಗಿ ಹಂಪಿ ಪ್ರದೇಶವು ಬಾದಾಮಿ ಚಾಲುಕ್ಯರ ಆಳ್ವಿಕೆಗೆ ಒಳಪಟ್ಟಿತ್ತೆಂದು ಹೇಳಬಹುದು.

**ರಾಷ್ಟ್ರಕೂಟರು**

"ರಾಷ್ಟ್ರಕೂಟರ ಕಾಲದ ಹಂಪಿಯ ಉಲ್ಲೇಖಿತ ಶಾಸನಗಳು ದೊರೆತ್ತಿಲ್ಲ. ಆದರೆ ಇವರ ಕಾಲದ ವಾಸ್ತು ರಚನೆಗಳು ವಿರೂಪಾಕ್ಷ ದೇವಾಲಯದ ಉತ್ತರ ದಿಕ್ಕಿಗಿರುವ ಕನಕಗಿರಿ ಗೋಪುರವನ್ನು ದಾಟಿ ಬಂದರೆ ಅಲ್ಲಿ ಪೂರ್ವಾಭಿಮುಖವಾಗಿ ನಿರ್ಮಿಸಲ್ಪಟ್ಟ ಸಣ್ಣ ಸಣ್ಣ ದೇವಾಲಯಗಳು ಕಂಡುಬರುತ್ತವೆ."[೧೫] ಅದರಲ್ಲಿ ಎರಡು ದೇವಾಲಯಗಳು ಉಳಿದವುಗಳೆಲ್ಲವುಗಿಂತ ಪ್ರಾಚೀನವಾಗಿದ್ದು ರಾಷ್ಟ್ರಕೂಟರ ಕಾಲಕ್ಕೆ ಸೇರಿದವುಗಳಾಗಿವೆ. ಅವು ಮಹಿಷಾಸುರ ಮರ್ದಿನಿ ಅಥವಾ ದುರ್ಗಾ ದೇವಾಲಯ ಹಾಗೂ ನಾಗನಂದೀಶ್ವರ ದೇವಾಲಯ. ಇವುಗಳ ರಚನಾ ಶೈಲಿ ಹಾಗೂ ಬಳಸಿದ ಮಾಧ್ಯಮದಿಂದ ಇವುಗಳನ್ನು ೧೦ನೇ ಶತಮಾನ ಅಂದರೆ ರಾಷ್ಟ್ರಕೂಟರ ಕಾಲಕ್ಕೆ ಸೇರಿರಬಹುದಾಗಿದೆ. ಆದರೆ "ಎಂ.ಎಸ್.ಕೃಷ್ಣಮೂರ್ತಿಯವರು ಮಹಿಷಮರ್ದಿನಿ ದೇವಾಲಯವು ನೊಳಂಬ ಶೈಲಿಯಲ್ಲಿದ್ದು ನೊಳಂಬರ ಅಪರೂಪದ ವಾಸ್ತುಕೃತಿ ಎಂದು ಹೇಳುತ್ತಾರೆ."[೧೬] ಒಟ್ಟಾರೆಯಾಗಿ ಅದೇನೆ ಇರಲಿ ಈ ಎಲ್ಲಾ ಅಂಶಗಳಿಂದ ರಾಷ್ಟ್ರಕೂಟರ ಆಳ್ವಿಕೆ ಹಂಪಿಯಲ್ಲಿ ಇತ್ತೆಂದು ಸ್ಪಷ್ಟವಾಗಿ ಗುರುತಿಸಬಹುದು.

**ಕಲ್ಯಾಣದ ಚಾಲುಕ್ಯರು ಮತ್ತು ನೊಳಂಬರು**

ರಾಷ್ಟ್ರಕೂಟರನ್ನು ಸಿಂಹಾಸನದಿಂದ ಇಳಿಸಿ ಪಟ್ಟಕ್ಕೆ ಬಂದ ಕಲ್ಯಾಣದ ಚಾಲುಕ್ಯರ ಕಾಲದ ಹಾಗೂ ಅವರ ಮಾಂಡಲೀಕರಾಗಿದ್ದ ನೊಳಂಬರ ಶಾಸನಗಳು ಈ ಪ್ರದೇಶದಲ್ಲಿ ದೊರೆತಿವೆ.

"ಕಲ್ಯಾಣ ಚಾಲುಕ್ಯ ಅರಸರ ಶಾಸನಗಳಲ್ಲಿ ಹಂಪಿಗೆ ಸಂಬಂಧಿಸಿದಂತೆ ಮೊದಲನೆಯದು ಕ್ರಿ.ಶ.೯೮೮ರಲ್ಲಿ ಹೊರಡಿಸಲಾದ ಕನ್ನಡ ಶಿಲಾಶಾಸನವಾಗಿದೆ."[೧೭] ಇದು ಮಣ್ಣಮಯ್ಯನೆಂಬ ಹೆಸರಿನ ಮಹಾತ್ಮನಿಗೆ ಅರಸು ಅಹವಮಲ್ಲನಿಂದ ಕೆಲವೊಂದು ಭೂದಾನವನ್ನು ಕೊಟ್ಟ ವಿವರಗಳನ್ನು ತಿಳಿಸುತ್ತದೆ. ಹೆಚ್ಚಿನ ವಿವರಗಳು ಅಳಿಸಿ ಹೋಗಿವೆಯಾದರೂ ಆ ಸ್ಥಳವನ್ನು ತುಂಗಭದ್ರೆಯ ತೆಂಕಣ ತಡಿಯ ಹಂಪಿಯೆಂದು ನೇರವಾಗಿ ಉಲ್ಲೇಖಿಸಿರುವುದನ್ನು ಗಮನಿಸಬಹುದು.

ಹಂಪಿಯ ಹತ್ತಿರವಿರುವ ಗೊನಾಳು ಎಂಬ ಗ್ರಾಮದಲ್ಲಿ ದೊರೆತ ಶಾಸನವು ಇರಿವ ನೊಳಂಬನಿಗೆ ಸಂಬಂಧಿಸಿದ ಶಾಸನವಾಗಿದೆ ಈ "ಶಾಸನದಲ್ಲಿ ಕಲ್ಯಾಣದ ಚಾಲುಕ್ಯ ಪದಸಿಯ ವಿಕ್ರಮಾದಿತ್ಯನ ಕಾಲದಲ್ಲಿ ಅವನ ಸಾಮಂತ ಇರಿವನೊಳಂಬ ಮತ್ತವನ ಪತ್ನಿಯು ಸ್ವಸ್ತಿ ಶಕವರ್ಷ ೯೩೬ ನೆಯ ಶ್ರಾವಣ ಮಾಸದಲ್ಲಿ ಪಂಪಾತೀರ್ಥದಲ್ಲಿನ ಮಹಾಕಾಳ ದೇವರಿಗೆ ಪನ್ನಸುಗಳನ್ನು ದಾನ ನೀಡಿದ ಉಲ್ಲೇಖವಿದೆ."[೧೮] ಶಾಸನವು ತ್ರುಟಿತಗೊಂಡಿದ್ದರಿಂದ ಹೆಚ್ಚಿನ ವಿವರಗಳು ತಿಳಿಯುವುದಿಲ್ಲ. ಶಾಸನದ ಮುಖ್ಯ ಅಂಶವೆಂದರೆ ಪಂಪಾ ಹಾಗೂ ಮಹಾಕಾಳ ಎಂಬ ಉಲ್ಲೇಖಗಳಿರುವುದು ಇದು ಪಂಪಾತೀರ್ಥದಲ್ಲಿ ಅಥವಾ ಹಂಪಿಯಲ್ಲಿ ಮಹಾಕಾಳ ದೇವರ ದೇವಾಲಯವಿದ್ದುದನ್ನು ತಿಳಿಸುತ್ತದೆ. ಆದರೆ "ಪ್ರಸ್ತುತದಲ್ಲಿ ಮಹಾಕಾಳ ಎಂಬ ದೇವಾಲಯವು ಕಾಣಿಸಿಗುವುದಿಲ್ಲ ಅಥವಾ ಗುರುತಿಸಲಾಗಿಲ್ಲ ಎಂದು ಹೇಳಬಹುದು. ನೊಳಂಬರ ಇನ್ನೊಂದು ಶಾಸನವೆಂದರೆ ಕ್ರಿ.ಶ. ೧೦೧೮ರ ಬಾಗಳೀ ಶಾಸನ."[೧೯] ಈ ಶಾಸನದಲ್ಲಿ ಚಾಲುಕ್ಯ ದೊರೆ ಜಗದೇಕಮಲ್ಲ, ಜಯಸಿಂಘನ ಮಾಂಡಳಿಕನಾದ ನೊಳಂಬ ವಿಜಾಯಾದಿತ್ಯನ ಉಲ್ಲೇಖವಿದ್ದು ಈತನು ಪಂಪಾಪುರದ ತೀರ್ಥಕೆ ವಿಜಯಂಗೆಯ್ದು ತಾತ್ಕಾಲದೊಳು ಬಾಳ್ಗುಳಿಯ ಕಲಿದೇವ ಸ್ವಾಮಿಗೆ ದಾನ ನೀಡಿದ ಉಲ್ಲೇಖಗಳಿವೆ.

ಈ ಶಾಸನದಿಂದ ತಿಳಿಯುವ ಮುಖ್ಯ ಅಂಶವೆಂದರೆ ಈ ಕಾಲಕ್ಕಾಗಲೇ ಪಂಪೆಯನ್ನು ಪಂಪಾಪುರವೆಂದು ಕರೆದಿದ್ದು ಇದು ಪವಿತ್ರ ಕ್ಷೇತ್ರವಾಗಿ ಬಹುವಿಸ್ತಾರವನ್ನು ಹೊಂದಿತ್ತೆಂಬುದು ತಿಳಿದುಬರುತ್ತದೆ. ಒಟ್ಟಾರೆ ಈ ಶಾಸನಗಳ ಪ್ರಕಾರ ಹಂಪಿ ಪ್ರದೇಶವು ನೊಳಂಬವಾಡಿ ೩೨ ಸಾಸಿರ ಪ್ರಾಂತ್ಯಕ್ಕೆ ಸೇರಿತ್ತೆಂಬುದು ತಿಳಿದುಬರುತ್ತದೆ.

**ಹೊಯ್ಸಳರು**

ಹೊಯ್ಸಳ ಇಮ್ಮಡಿ ಸೋಮೇಶ್ವರನ ಕ್ರಿ.ಶ.೧೨೪೦ ರ ಶಾಸನವು "ಹಂಪಿಯ ವಿರೂಪಾಕ್ಷ ದೇವಾಲಯದ ಕನಕಗಿರಿ ಗೋಪುರದಲ್ಲಿ ಪಶ್ಚಿಮಕ್ಕೆ ಇದೆ. ಈ ಶಾಸನವು ಸೋಮೇಶ್ವರನು ಹೇಮಕೂಟದಲ್ಲಿ ವಿರೂಪಾಕ್ಷ ದೇವರಿಗೆ ಚಿಕ್ಕರಜೆ ಎಂಬ ಗ್ರಾಮವನ್ನು ದಾನ ನೀಡಿ ಅದರ ಆದಾಯದಲ್ಲಿ ಸಲ್ಲಬೇಕಾದ ಪೂಜಾ ವಿವರಗಳನ್ನು ತಿಳಿಸುತ್ತದೆ."[೨೦] ಇದು ಬಿಟ್ಟರೆ ಹೊಯ್ಸಳರ ಕಾಲದ ದಾಖಲೆಗಳಿಲ್ಲ. ಹಂಪಿಯ ಉಲ್ಲೇಖ ಬಂದಿರುವುದಿಲ್ಲ. ಆದರೆ ಮುಂದೆ ಬಂದ ವಿಜಯನಗರದ ಸಾಮ್ರಾಜ್ಯ ಸ್ಥಾಪಕರಾದ ಹರಿಹರ ಬುಕ್ಕರು ಹೊಯ್ಸಳ ಮುಮ್ಮಡಿ ಬಲ್ಲಾಳನ ಮಹಾಮಂಡಲೇಶ್ವರರಾಗಿಯೇ

ಸಾಮ್ರಾಜ್ಯ ಸ್ಥಾಪಿಸಿ ಹೊಯ್ಸಳರ ಪರಂಪರೆಯನ್ನು ಮುಂದುವರೆಸಿದರು ಎಂಬ ಅಂಶಗಳು ಚರಿತ್ರೆಯ ಅಧ್ಯಯನಗಳಿಂದ ತಿಳಿದುಬರುತ್ತದೆ.

**ಹೊಸಮಲೆದುರ್ಗದ ಅರಸರು**

ಹಂಪಿಯಲ್ಲಿ ವಿಜಯನಗರ ಆಳ್ವಿಕೆಯ ಪೂರ್ವದಲ್ಲಿ ಮುಮ್ಮಡಿ ಸಿಂಗೇಯ ನಾಯಕನ ಮಗನಾದ ಕಂಪಲದೇವನ ಆಳ್ವಿಕೆ ಇತ್ತು. ಕುಮ್ಮಟದ ಅರಸರ ಕುರಿತು ತಿಳಿಯಲು ಸಾಹಿತ್ಯ ಕೃಷಿಯಿತ್ತು ಮತ್ತು ಶಾಸನಗಳು ಸಹಾಯಕವಾಗಿವೆ. "ಕುಮ್ಮಟದುರ್ಗ ಮತ್ತು ಹೊಸಮಲೆದುರ್ಗಗಳೆರಡನ್ನು ರಾಜಧಾನಿಯನ್ನಾಗಿಸಿಕೊಂಡು ಆಳಿದ ಪ್ರಮುಖ ಅರಸರ ಕುಮಾರರಾಮ ಅಥವಾ ರಾಮನಾಥ. ಕ್ರಿ.ಶ.೧೩೨೭ರಲ್ಲಿ ದೆಹಲಿಯ ಮಹಮ್ಮದ್ ಬಿನ್ ತುಘಲಕ್‌ನ ಸೈನ ಕುಮ್ಮಟದ ಮೇಲೆ ದಾಳಿ ಮಾಡಿತು. ಈ ದಾಳಿಯಲ್ಲಿ ಕಂಪಿಲದೇವ ಹಾಗೂ ಅವನ ಮಗನಾದ ರಾಮನಾಥ ಮರಣ ಹೊಂದಿದರು."[೨೧] ಕುಮಾರರಾಮನು ತನ್ನ ಶೌರ್ಯ ಮತ್ತು ಆದರ್ಶ ಗುಣಗಳಿಂದ ದೈವತ್ವದ ಸ್ಥಾನ ಪಡೆದಿರುವನು. ಶಾಸನಗಳು ಈತನ ಹೆಸರಿನಲ್ಲಿ ದೇವಾಲಯಗಳನ್ನು ನಿರ್ಮಿಸಿ ಪೂಜಿಸಿದ ಬಗ್ಗೆ ತಿಳಿಸುತ್ತದೆ. ಹೀಗೆ ಹೊಸಮಲೆದುರ್ಗದ ಅರಸರು ವಿಜಯನಗರದ ಅರಸರ ಪೂರ್ವದಲ್ಲಿ ಹಂಪಿಯಲ್ಲಿ ಅತ್ಯಂತ ಪ್ರಬಲ ಹಾಗೂ ಪ್ರಭಾವಿ ಅರಸರಾಗಿದ್ದರೆನ್ನಬಹುದು.

ಇನ್ನೊಂದು ಮುಖ್ಯವಾದ ಅಂಶವೆಂದರೆ ಈ ಮನೆತನದ ಕಂಪಿಲರಾಯನು ಹಂಪಿಯಲ್ಲಿ ಹೇಮಕೂಟದ ದೇವಾಲಯದ ಸಮೂಹದಲ್ಲಿ ಒಂದು ಶೈವ ತ್ರಿಕೂಟ ದೇವಾಲಯವನ್ನು ಕಟ್ಟಿಸಿದ್ದು, ಇದಕ್ಕೆ ಶಾಸನ ಉಲ್ಲೇಖವೂ ಇದೆ. ಇದರಲ್ಲಿ ಮುಮ್ಮಡಿ ಸಿಂಗೆಯನಾಯಕನ ಮಗನಾದ ವೀರಕಂಪಿಲದೇವ ತಮ್ಮ ತಾಯಿ ಮಾರನಾಕಿತ ಹಾಗೂ ತಂದೆ ಸಿಂಗಿಯನಾಯಕ ವಂಶ ಪೆರುಡಿನಾಯಕನ ಹೆಸರಿನಲ್ಲಿ ಮೂರು ಲಿಂಗಗಳನ್ನು ಪ್ರತಿಷ್ಠೆ ಮಾಡಿ ಶಿವಾಲಯ ಕಟ್ಟಿಸಿದುದನ್ನು ತಿಳಿಸುತ್ತದೆ.

**ವಿಜಯನಗರ ಅರಸರು**

೧೪ನೇ ಶತಮಾನದ ಆರಂಭದಲ್ಲಿ ಉತ್ತರದಲ್ಲಿ ಪ್ರಬಲರಾಗಿದ್ದ ಮಹಮ್ಮದೀಯರ ಶಕ್ತಿಯು, ದಕ್ಷಿಣದಲ್ಲಿನ ಆನೆಗುಂದಿಯಂತಹ ಚಿಕ್ಕ ರಾಜ್ಯಗಳನ್ನಲ್ಲದೆ, ದೇವಗಿರಿ, ವರಂಗಲ್ಲು, ಹೊಯ್ಸಳ ಮಧುರೆಯಂತಹ ದೊಡ್ಡ ರಾಜ್ಯಗಳನ್ನು ಉರುಳಿಸಿತು. ಇಂತಹ ಸಂದರ್ಭದಲ್ಲಿ ಈ ಪಾರತಂತ್ರ್ಯವನ್ನು ಅತ್ಯಂತ ಪ್ರಬಲವಾಗಿ ಪ್ರತಿಭಟಿಸಿದವನು ಹೊಯ್ಸಳರ ಕೊನೆಯ ಪ್ರಬಲ ಅರಸ ಮುಮ್ಮಡಿ ವೀರಬಲ್ಲಾಳ. ಈ "ಮುಮ್ಮಡಿ ವೀರಬಲ್ಲಾಳನು ಮಹಾಮಂಡಲೇಶ್ವರನಾಗಿದ್ದ ಹರಿಹರನು ಪರಕೀಯ ದಾಳಿಗಳನ್ನು ಸಮರ್ಥವಾಗಿ ಎದುರಿಸುತ್ತಿದ್ದ ಸಾಮಂತನಾಗಿದ್ದನು."[೨೨] ಹೊಯ್ಸಳ ವಂಶದ ಕೊನೆಯ ಕುಡಿಯಾಗಿದ್ದ ಮುಮ್ಮಡಿ ವೀರಬಲ್ಲಾಳನ ಮಗ ವೀರ ವಿರೂಪಾಕ್ಷ ನಾಲ್ವಡಿ ಬಲ್ಲಾಳನು ಮಡಿದ ಮೇಲೆ ಸ್ವತಂತ್ರನಾಗಿ ಆಳ್ವಿಕೆ ಆರಂಭಿಸಿದನು. ಈತನು ಶೃಂಗೇರಿಯ ಶ್ರೀಶಂಕರಾಚಾರ್ಯ ಮಠದ ಗುರುಗಳಾಗಿದ್ದ ವಿದ್ಯಾರಣ್ಯರ ಸಹಾಯದಿಂದ ಹಾಗೂ ತನ್ನ ನಾಲ್ಕು ಜನ ಸಹೋದರರಾದ

ಬುಕ್ಕರಾಯ, ಕಂಪಣ, ಮಾರಪ್ಪ, ಮುದ್ದಪ್ಪರ ಬೆಂಬಲದಿಂದ ಕ್ರಿ.ಶ.೧೩೩೬ ರಲ್ಲಿ ವಿದ್ಯಾನಗರ ಅಥವಾ ವಿಜಯನಗರ ಎಂಬ ಹೆಸರಿನಲ್ಲಿ ಸ್ವತಂತ್ರ ಸಾಮ್ರಾಜ್ಯವನ್ನು ಕಟ್ಟಿ ಆಳ್ವಿಕೆ ಮುಂದುವರೆಸಿದನು. ಹೀಗೆ ವಿಜಯನಗರ ಸಾಮ್ರಾಜ್ಯ ದಕ್ಷಿಣದಲ್ಲಿನ ಮುಸ್ಲಿಮರ ದಾಳಿಗಳನ್ನು ತಡೆಗಟ್ಟುವ ಹಾಗೂ ಹಿಂದೂ ಪರಂಪರೆಯನ್ನು ರಕ್ಷಿಸುವ ಪ್ರಬಲ ಸಾಮ್ರಾಜ್ಯವಾಗಿ ಉದಯಿಸಿತು ಎಂದು ಹೇಳಬಹುದು.

"ವಿಜಯನಗರ, ವಿಜಯನಗರ ಪಟ್ಟಣ, ವಿದ್ಯಾನಗರ, ವಿದ್ಯಾನಗರಿ, ಹೊಸಪಟ್ಟಣ ಮುಂತಾದ ಹೆಸರುಗಳಿಂದ ಕರೆಯಲ್ಪಡುವ ವಿಜಯನಗರ ಸಾಮ್ರಾಜ್ಯವು ಕ್ರಿ.ಶ. ೧೩೩೬ ರಿಂದ ೧೫೬೫ ರವರೆಗೆ ಸಂಗಮ, ಸಾಳುವ, ತುಳುವ, ಅರವೀಡು ಎಂಬ ನಾಲ್ಕು ಮನೆತನಗಳೂ ಆಳ್ವಿಕೆಯನ್ನು ನಡೆಸಿದವು."[೨೩] ಮೊದಲು ಆನೆಗೊಂದಿ ನಂತರದಲ್ಲಿ ಹಂಪಿ ಕೊನೆಯಲ್ಲಿ ಪೆನುಗೊಂಡಗಳು ಇವರ ರಾಜಧಾನಿಗಳಾಗಿ ಮೆರೆದವು.

"ವರಹ"ವು ಇವರ ರಾಜ್ಯ ಲಾಂಛನವಾಗಿ ಶೋಭಿಸಿತು.

ಹೀಗೆ ದಕ್ಷಿಣ ಭಾರತದಲ್ಲಿ ಸುಮಾರು ಮೂರು ಶತಮಾನಗಳವರೆಗೂ ಹೆಚ್ಚು ಕಾಲಾವಧಿಯ (ಸುಮಾರು ೧೪ ರಿಂದ ೧೭ನೆಯ ಶತಮಾನಗಳ) ವರೆಗಿನ ಆಳ್ವಿಕೆಯಲ್ಲಿ ನಡೆಸಿದ ವಿಶಾಲ ಸಾಮ್ರಾಜ್ಯವೆಂದು ವಿಜಯನಗರದ ಕೂಗು ಆಗಿದೆ. ಕ್ರಿ ಶ ೨೬೮೧ರಲ್ಲಿ ಸಾಮ್ರಾಜ್ಯವು ಅಸ್ತಂಗತವಾಯಿತು.

### ೨.೪. ಸಾಮಾಜಿಕ ಹಿನ್ನೆಲೆ

"ವಿಜಯನಗರ ಎಂದಾಕ್ಷಣ ನಮ್ಮ ಕಣ್ಮುಂದೆ ಬಂದು ನಿಲ್ಲುವ ಚಿತ್ರ ವಿರೂಪಾಕ್ಷನ ದೇವಾಲಯ ನಂತರದಲ್ಲಿ ಮಾಲ್ಯವಂತ, ರಾಣಿಸ್ನಾನಗೃಹ, ಹಜಾರರಾಮ, ಕಲ್ಲಿನ ರಥ, ಪುರಂದರಮಂಟಪ, ತುಲಾಭಾರ, ಮಹಾನವಮಿ ದಿಬ್ಬ, ಸಾಸಿವೆ–ಕಡಲೆಕಾಳು ಗಣಪತಿ, ಭಗ್ನ ವಿಠಲ ಮಂದಿರ ಮತ್ತಿತರ ಹಾಳು ಬಿದ್ದಿರುವ ದೇವಾಲಗಳ ಮಂಟಪಗಳು, ಕೋಟೆ–ಕೊತ್ತಲಗಳು ಮತ್ತು ಅರಮನೆಯ ಹಾಗೂ ಅಧಿಕಾರಿಗಳ ನಿವೇಶನಗಳ ಅವಶೇಷಗಳು ಪ್ರಸಿದ್ಧ ವಿರೂಪಾಕ್ಷೇಶ್ವರನ ವರ್ಣನೆ ತನ್ನದಗಳೆಯಲ್ಲಿ ಮಾಡಿರುವುದನ್ನು ಕಾಣಬಹುದು".[೨೪]

**ಪಟ್ಟಣದ ಎಲ್ಲಮ್ಮ:** ಹಂಪಿಯ ಹಜಾರರಾಮ ಚಂದ್ರ ದೇವಸ್ಥಾನದ ಮುಂಭಾಗದಲ್ಲಿರುವ ಹಳೆಯ ಪಟ್ಟಣದ ದೇವತೆಯೇ ಪಟ್ಟಣದ ಎಲ್ಲಮ್ಮ. ಈಕೆಯ ಬಗೆಗೆ ಬೇರೆ ಬೇರೆ ರೀತಿಯ ಕತೆಗಳಿವೆ. ಮುಖ್ಯವಾಗಿ ವಿಜಯನಗರದ ಅರಸರು ಬೇರೆ ರಾಜ್ಯಗಳನ್ನು ವಶಪಡಿಸಿಕೊಳ್ಳಲು ಯುದ್ಧಕ್ಕೆ ಹೊರಡುವ ಮುನ್ನ ಈಕೆಯ ಅಪ್ಪಣೆ ಪಡೆದು ವಿಜಯ ತಾಂಬೂಲ ಪಡೆದು ಹೋಗುತ್ತಿದ್ದರಂತೆ ಈಕೆಯೇ ವಿಜಯನಗರ ಪಟ್ಟಣದ ಮುಖ್ಯ ಆದಿದೇವತೆಯಾಗಿದೆ.

ಹಂಪಿಯ ತನ್ನ ಸುತ್ತ ನಾಲ್ಕು ದಿಕ್ಕಿನಲ್ಲಿರುವ ಪ್ರಮುಖ ದೇವರುಗಳ ನಾಮನಿರ್ದೇಶನ ಮಾಡಿದರೆ ಮಧ್ಯದಲ್ಲಿರುವುದೇ ವಿರೂಪಾಕ್ಷೇಶ್ವರನ ಕ್ಷೇತ್ರ ಎಂದು ಕರೆಯಲಾಗಿದೆ. ವಿಜಯನಗರ

ಸಾಮ್ರಾಜ್ಯವು ಸ್ಥಾಪನೆಯ ೧೪ನೇ ಶತಮಾನದಲ್ಲಿ ಮೊದಲನೆ ಪೂರ್ವದಲ್ಲಿ ದಕ್ಷಿಣ ಭಾರತದ ಇತಿಹಾಸದಲ್ಲಿ ನಡೆದ ಅತ್ಯಂತ ಪ್ರಮುಖವಾದ ಘಟನೆ, ಒಂದು ದೇಶದ ಆರ್ಥಿಕ ಪ್ರಗತಿಯು ಆದೇಶದ ವ್ಯವಸಾಯಕ್ಕೆ, ವ್ಯಾಪಾರಕ್ಕೆ, ಕೈಗಾರಿಕೆ, ಸಾರಿಗೆ, ತೆರಿಗೆ ನೀತಿ, ರಕ್ಷಣಾ ನೀತಿ ಮುಂತಾದವು ಎಲ್ಲಾ ವಿಷಯಗಳನ್ನು ಒಳಗೊಂಡಿರುತ್ತದೆ. ಪ್ರಾಚೀನ ಕಾಲದಿಂದಲೇ ಭಾರತವು ವ್ಯವಸಾಯ ಪ್ರಧಾನವಾಗಿದೆ. ಭೂಮಿಯೇ ಆಸ್ತಿ ಮತ್ತು ಆದಾಯ ಮೂಲವಾದ್ದರಿಂದ ದೊರೆಗಳು ಕೆಲವು ಸೇವೆಗಳನ್ನು ದೇವಸ್ಥಾನಗಳು, ಅಗ್ರಹಾರಗಳ, ಮಠಗಳು ಇತರ ಸೇವಾ ಸಂಸ್ಥೆಗಳು ಸಹ ಭೂಮಿಯನ್ನು ಹೊಂದಲು ಇಚ್ಛಿಸುತ್ತಿದ್ದರು. ಭೂಮಿಯಿಂದ ಬರುತ್ತಿದ್ದ ಆದಾಯದ ಭೂಮಿಯನ್ನು ದಾನದತ್ತಿ ರೂಪದಲ್ಲಿ ಆರ್ಥಿಕ, ಸಾಮಾಜಿಕ ಮತ್ತು ಧಾರ್ಮಿಕ ಸೇವೆಗಳಿಗಾಗಿ ವ್ಯಕ್ತಿಗಳಿಗೆ ಅಥವಾ ಸಂಸ್ಥೆಗಳಿಗೆ ಸಹಾಯ ನೀಡುತ್ತಿದ್ದರು. "ಸಾಮಾಜಿಕ ಹಿನ್ನೆಲೆಯನ್ನು ಗುರುತಿಸುವಂತಹ ಪರಿಣಾಮ ಬೀರುವ ಸ್ಥಳವೆಂದರೆ ಹಂಪಿ ವಿರೂಪಾಕ್ಷ ದೇವಾಲಯದ ಮಹಾರಂಗಮಂಟಪದ ಒಳಮಾಳಿಗೆಯಲ್ಲಿರುವ ಚಿತ್ರಗಳು ಆ ಕಾಲದ ಅತ್ಯಂತ ಪ್ರಮುಖವಾದ ಉದಾಹಾರಣೆಗಳಾಗಿವೆ. ಕ್ರಿ.ಶ.೧೬ನೇ ಶತಮಾನದ ಮೊದಲನೆಯ ದಶಕದಲ್ಲಿ ರಚನೆಯಾಗಿರಬಹುದು."[೨೫] ವಿಜಯನಗರ ಸಾಮ್ರಾಜ್ಯದಲ್ಲಿ ಸಾಮಾಜಿಕ ಪ್ರತಿಬಿಂಬಿಸುವಂತಹ ಅಂಶಗಳೆಂದರೆ ಚಿತ್ರಕಲೆ, ಸಂಗೀತ, ನೃತ್ಯ, ಸಾಹಿತ್ಯ, ಗಿರಿಜಾಕಲ್ಯಾಣದ ಇತಿಹಾಸದ ನೆಲೆಗಳು ಹಾಗೂ ಭಿತ್ತಿಚಿತ್ರಗಳು ಅನೇಕ. ಕೃಷ್ಣದೇವರಾಯನು ಕಟ್ಟಿಸಿದ ಕೆಲವೊಂದು ದೇವಾಲಯಗಳು ಸಾಮಾನ್ಯ ಜನರಿಗೆ ಹಾಗೂ ವಿದೇಶಿ ಪ್ರವಾಸಿಗರಿಗೆ, ಅನೇಕ ಕಲಾವಿದರಿಗೆ ಪ್ರತಿರೂಪವನ್ನು ಸೂಚಿಸುವಂತಹ ಐತಿಹಾಸಿಕ ವಿಜಯನಗರ ಒಂದು ಅದ್ಭುತ ಇತಿಹಾಸವಾಗಿದೆ ಮತ್ತು ಈ ಸಾಮ್ರಾಜ್ಯಕ್ಕೆ ಸಂಬಂಧಿಸಿದ ಸಂಗಮ ವಂಶದ ಉತ್ತಮವಾದ ಚರಿತ್ರೆಯಾಗಿ ಅಥವಾ ಸಾಮಾಜಿಕ ಹಿನ್ನೆಲೆಯನ್ನು ನೀಡಿದಂತಹ ಮನೆತನಗಳಾಗಿವೆ. ಇಲ್ಲಿ ರಾಮಾಯಣ, ಮಹಾಭಾರತದಂತಹ ಪೌರಾಣಿಕ, ಇತಿಹಾಸದ ನೆಲೆಗಳನ್ನು ದಕ್ಷಿಣ ಭಾರತದಲ್ಲಿ ಮರೆಯಲಾಗದ ಇತಿಹಾಸವನ್ನು ಕಟ್ಟಿರುವ ರಾಜಧಾನಿಯಾಗಿದೆ. ಇಲ್ಲಿಯ ನರಸನಾಯಕ ಮತ್ತು ನಾಗಲಾದೇವಿಯರು ಮತ್ತು ಕೃಷ್ಣದೇವರಾಯನಿಗೆ ಸದಾ ಆರಾಧನಾ ಮತ್ತು ದೇವರಿಗೆ ಸಮಾನವಾದವರಾಗಿದ್ದರು. "ವಿಜಯನಗರದಲ್ಲಿ ವಹಿಸಿದ ಪಾತ್ರದಷ್ಟೇ ರಾಣಿ ನಾಗಲಾದೇವಿ ಗಮನಾರ್ಹ ಪಾತ್ರವಹಿಸಿದ್ದು ಈವರೆಗೂ ಬೆಳಕಿಗೆ ಬಂದಿಲ್ಲ. ಈ ಹಿನ್ನೆಲೆಯ ಸಾಂಸ್ಕೃತಿಕ ಬದುಕು ಹೇಗಿತ್ತೆಂಬ ಬಗ್ಗೆ ತಿಳಿಯುವುದು ಅಗತ್ಯ. ಇಲ್ಲಿ ಕೃಷ್ಣದೇವರಾಯನ ಮೂಲ ಹೆಸರು ಸಹಬೇರೆ ಇದ್ದಂತೆ ಇದೆ. ತಮ್ಮ ತಾತ ತಂದೆಗೆ ನಾಯಕ ಎಂದಿದ್ದ (ಈಶ್ವರನಾಯಕ, ನರಸನಾಯಕ) ಈತನಿಗೆ ರಾಯ ಎಂದು ಬಂದ ಬಗ್ಗೆ ಪರಿಶೀಲನೆ ನಡೆಯಬೇಕಾಗಿದೆ."[೨೬] ಈ ಎಲ್ಲಾ ಸಂಗತಿಗಳ ಮೂಲಕ ನಾಗಲಾದೇವಿ ಸ್ಥಳೀಯಳೋ ಅಥವಾ ಹೊರಗಿನವಳೋ, ಕನ್ನಡಿಗಳೋ, ತೆಲುಗಿನವಳೋ ಎಂದು ಅನುಮಾನಗಳು ಕಾಡುತ್ತದೆ. ನಾಗಲಾದೇವಿ ಶೈವ ಪಂಥಕ್ಕೆ ಸೇರಿದ್ದರೆ, ನರಸನಾಯಕ ವೈಷ್ಣವ ಪಂಥಕ್ಕೆ ಸೇರಿರುತ್ತಾನೆ. ಎಲೆಮರೆ ಕಾಯಿಯಂತೆ ಸಾಮ್ರಾಜ್ಯಕ್ಕೆ ಸಲ್ಲಿಸಿದ ಅನುಪಮ ಸೇವೆಯಿಂದ ತಂದೆ-ತಾಯಿಗಳಿಗೆ ಪೂಜನೀ ಸ್ಥಾನ ನೀಡಿದ್ದಾನೆ. ನಾಗಲಾದೇವಿಯ

ಹಿನ್ನೆಲೆಯ ಪ್ರಭಾವವು ಸಾಕಷ್ಟು ಪ್ರಬಲವಾಗಿದ್ದಿರಬೇಕು. ವಿಜಯನಗರ ಕಾಲದ ಸಾಮಾಜಿಕ ಚರಿತ್ರೆಯಲ್ಲಿ ಮತ್ತು ಹಿನ್ನೆಲೆಯಲ್ಲಿ ಮಹಿಳೆಯರ ಸ್ಥಾನಮಾನ ತುಂಬಾ ಶೋಚನೀಯವಾಗಿತ್ತು. ರಾಜಪ್ರಭುತ್ವವು ಜನಸಾಮಾನ್ಯರಿಗೂ ಉನ್ನತ ಸ್ಥಾನಮಾನ ನೀಡಿದ್ದು ಶ್ಲಾಘನೀಯ. ಹಾಗೆಯೇ ಕನಿಷ್ಟ ಜನಜೀವನ ನಡೆಸಿದವರ, ಅಲಕ್ಷಿತರ, ಶೋಷಿತರ ನೆಲೆಯನ್ನು ಗುರುತಿಸುವ ಅಗತ್ಯತೆಯಿದೆ. ನಾಗಲಾದೇವಿ ಉನ್ನತ ರಾಜವಂಶದವಳೆಂದು ಹೇಳಿದರೆ, ಇನ್ನೊಂದು ವಾದವು ಸ್ಥಳೀಯ ಬೇಡ ಜನಾಂಗದವಳೆಂದು, ನರ್ತಕಿ, ದಾಸಿ, ದೇವದಾಸಿ (ಹುಲಿಗಿ ಪರಿಸರ), ಶಣಿಕ ಸ್ತ್ರೀ, ಮೂಲ ಬುಡಕಟ್ಟಿನವಳು, ಶಿಷ್ಟ ಸಂಪ್ರದಾಯಕ್ಕೆ ಸೇರಿದವಳು ಎಂದು ಹಲವಾರು ವಾದಗಳಿವೆ.

ಹೀಗೆ ಇನ್ನೊಂದು ಸನ್ನಿವೇಶವು ಗಮನಿಸಿದರೆ ವಿಜಯನಗರದ ಪ್ರಾಚೀನ ಪ್ರಥಮ ಪಟ್ಟಣ ವಿರೂಪಾಪುರ. ಕೃಷ್ಣದೇವರಾಯನ ಕಾಲದಲ್ಲಿ ನಿರ್ಮಾಣಗೊಂಡ ವಿಜಯನಗರ ಎರಡನೇ ಪುರವೆಂದರೆ ಕೃಷ್ಣಾಪುರ. ಈ ದೇವಾಲಯ ಹಂಪಿ ಪರಿಸರದ ಸುತ್ತಮುತ್ತಲಿನ ಪ್ರದೇಶದಲ್ಲಿ ಸಾಮಾನ್ಯ ಜನರಿಗೆ ಪ್ರತಿಬಿಂಬಿಸುವಂತಹ ಪ್ರತಿಕ್ರಿಯೆಯೂ ಆಗಿದೆ. "ಇಲ್ಲಿನ ಕೃಷ್ಣದೇವಾಲಯದ ಸುತ್ತಮುತ್ತಲಿನ ಪ್ರದೇಶವೇ ಕೃಷ್ಣಪುರ. ಕೃಷ್ಣದೇವಾಲಯ ಹಂಪಿಯ ಪ್ರಮುಖ ದೇವಾಲಯಗಳಲ್ಲಿ ಒಂದಾಗಿದೆ. ಈ ದೇವಾಲಯ ಕಮಲಾಪುರದತ್ತ ಹೋಗುವ ದಾರಿಯಲ್ಲಿ ವಿರೂಪಾಕ್ಷ ಬಜಾರಿನ ದಕ್ಷಿಣದಲ್ಲಿದೆ. ಕ್ರಿ.ಶ.೧೫೧೩ ರಿಂದ ಈ ಪ್ರದೇಶಕ್ಕೆ 'ಕೃಷ್ಣಾಪುರ' ಎಂಬ ಹೆಸರು ಬಂದಿತ್ತು. ಇಲ್ಲಿನ ಬಾಲಕೃಷ್ಣ ದೇವಾಲಯದ ಪ್ರಕಾರ ಒರಿಸ್ಸಾದ ಗಜಪತಿಯನ್ನು ಸೋಲಿಸಿದ ಕೃಷ್ಣದೇವರಾಯ ವಿಜಯನಗರದ ಸ್ಮಾರಕವಾಗಿ ಉದಯಗಿರಿಯಿಂದ ಬಾಲಕೃಷ್ಣ ವಿಗ್ರಹವನ್ನು ತಂದು ಇಲ್ಲಿ ದೇವಾಲಯ ಕಟ್ಟಿಸಿ ಪ್ರತಿಷ್ಠಾಪನೆ ಮಾಡಿಸಿದ. ಆಗ ಅಲ್ಲಿ ಕೃಷ್ಣಾಪುರ ಬೆಳೆಯಿತು. ಹೀಗೆ ವಿಜಯನಗರ ಕಾಲದಲ್ಲಿ ಕೃಷ್ಣಬಜಾರ್ ಸಾಂಸ್ಕೃತಿಕ ಮತ್ತು ಧಾರ್ಮಿಕ ಆಚರಣೆಗಳ ಕೇಂದ್ರವಷ್ಟೆ ಅಲ್ಲದೆ, ಪ್ರಮುಖವಾಗಿ ಅಲ್ಲಿ ಜನಸಾಮಾನ್ಯರ ಮನದಲ್ಲಿ ಮೂಡುವಂತಹ ಪ್ರೇರಣೆಗಳು ಮಾರುಕಟ್ಟೆ ಮತ್ತು ವಾಣಿಜ್ಯ ಕೇಂದ್ರವಾಗಿತ್ತು."[೨೭] ಒಂದು ಶಿಲಾಶಾಸನದಲ್ಲಿ ಬ್ರಾಹ್ಮಣರ ಮನೆಗಳ ದಾರಿಯಲ್ಲಿ ಅಂಗಡಿಗಳು, ಶ್ರೀಬಾಲಕೃಷ್ಣ ತೇರು, ಬೀದಿಯ ನಿರ್ವಹಣೆಗೆ ಭೂದಾನ ಮುಂತಾದವುಗಳ ಪ್ರಸ್ತಾಪವಿದೆ. ಕೃಷ್ಣಾಪುರ ಪೇಟೆಯ ಅಂಗಡಿಗೆ ದಾನವಾಗಿ ನೀಡಿದನೆಂದು ಮತ್ತೊಂದು ಶಾಸನ ವಿವರಗಳನ್ನು ಹೇಳುತ್ತದೆ. ಅಲ್ಲಿ ಅನೇಕ ದವಸ ದಾನ್ಯದ ಅಂಗಡಿಗಳಿದ್ದವೆಂದು ಆವರ್ತಕರು ಅಂಗಡಿಗಳ ಬಳಿಯೇ ವಾಸವಾಗಿದ್ದರೆಂದೂ ಆ ಶಾಸನ ಸ್ಪಷ್ಟಪಡಿಸುತ್ತದೆ ಮತ್ತು ಮುಖ್ಯನಗರದೊಡನೆ ಕೃಷ್ಣಾಪುರಕ್ಕೆ ಸಂಪರ್ಕ ಕಲ್ಪಿಸುವ ರಸ್ತೆಯನ್ನು ಅರ್ಥವತ್ತಾಗಿ ದೇವರ ಬೀದಿ ಎಂದು ಕರೆಯುತ್ತಿದ್ದರು. ಹೀಗೆ ಕೃಷ್ಣಾಪುರದ ಮಾರುಕಟ್ಟೆಯಲ್ಲಿ ದವಸ ದಾನ್ಯಗಳಲ್ಲದೆ ಇತರ ಸರಕು ಸಾಮಾನು ಸರಂಜಾಮುಗಳನ್ನು ಮಾರಾಟ ಮಾಡಲಾಗುತ್ತಿತ್ತು. ಆದರೆ ಹಂಪಿಯ ಪರಿಸರದಲ್ಲಿನ ಆಗಿನ ದಿನಗಳಲ್ಲಿ ರಾಜಮಹಾರಾಜರು ವ್ಯಾಪಾರದಲ್ಲಿ ವಜ್ರ, ವೈಢೂರ್ಯಗಳನ್ನು ವ್ಯಾಪಾರವನ್ನಾಗಿ ಮಾಡುತ್ತಿದ್ದರು. ಅನೇಕ ಅಂಗಡಿಗಳು ಬಳಿಕ ವಿದೇಶಿಯರಿಗೆ ವಾಸಿಸಲಿಕ್ಕೆ ನಿಲಯಗಳ ಹೆಚ್ಚಳಕೆ ಮಾಡಲಾಯಿತು. ಹಂಪಿ ಪರಿಸರದ ಸುತ್ತಮುತ್ತಲಿನಲ್ಲಿ ಕೃಷಿಯ ಮೂಲಕ ಅನೇಕ ದವಸ-ದಾನ್ಯಗಳು

ಬೆಳೆಯುತ್ತಿದ್ದರು. ಪ್ರವಾಸಿಗರಿಗೆ ಪ್ರತಿಬಿಂಬಿಸುವಂತಹ ಐತಿಹಾಸಿಕ ನೆಲಗಳು ಆಗಿತ್ತು. ಸಾಮಾನ್ಯ ಜನರಲ್ಲಿ ಪರಿಣಾಮ ಬೀರುವಂತಹ ಐತಿಹಾಸಿಕ ಸ್ಥಳಗಳೆಂದರೆ ಮತ್ತು ಸಮಾಜಕ್ಕೆ ಹತ್ತಿರವಿರುವಂತಹ ನೆಲೆಗಳು ವಿರೂಪಾಕ್ಷ ದೇವಾಲಯ, ಗಣಪತಿ ದೇವಾಲಯ, ಉಗ್ರನರಸಿಂಹ ದೇವಾಲಯ, ಕಲ್ಲಿನರಥ, ಪುರಂದರ ಮಂಟಪ, ಸೂಳೆಬಜಾರ್, ಪಂಪಾಸರೋವರ, ಹಜಾರಾರಾಮದೇವಾಲಯ, ಮಹಾನವಮಿ ದಿಬ್ಬ, ಪುಷ್ಕರಣಿ, ಕಮಲ ಮಹಲ್ ಏಡಿಗುಡ್ಡ, ವಿದ್ಯಾರಣ್ಯರ ಮಠ. ವಿರೂಪಾಕ್ಷ ದೇವಾಲಯದ ಒಳಾಂಗಣದ ಗಿರಿಜಾಕಲ್ಯಾಣ ಭಿತ್ತಿ ಚಿತ್ರಗಳು, ಉದ್ದಾನ ವೀರಭದ್ರ, ಮೂಲತ ವಿರೂಪಾಕ್ಷ, ಆಂಜನೇಯ ದೇವಾಲಯ, ಗಾಯತ್ರಿ ಪೀಠ, ಕೃಷ್ಣ ದೇವಾಲಯ ಇನ್ನೂ ಉಳಿದ ದೇವಾಲಯಗಳು ಜನರಲ್ಲಿ ಮರೆಯದ ನೆನಪುಗಳು ಮತ್ತು ಸಾಮಾಜಿಕ ಹಿನ್ನೆಲೆಯ ನೆಲೆಯನ್ನು ಕಂಡುಕೊಳ್ಳುವಂತಹ ಇತಿಹಾಸ ಆಗಿದೆ.

"ಮಹಾರಂಗಮಂಟಪ ಒಳಮಾಳಿಗೆಯು ಆಯತಾಕಾರವಾಗಿದ್ದು, ಈ ಆಯತ ಸ್ಥಳಾವಕಾಶವನ್ನು ಒಂದು ರಟ್ಟಿಗೆ ಕ್ಯಾನವಾಸನ್ನು ಮಾಡಿ ಹೀಗೆ ಭಾಗ ಉಪಬಾಗಿಸಬೇಕು. ಎಲ್ಲೆಲ್ಲಿ ಯಾವ ಚಿತ್ರಗಳನ್ನು ಚಿತ್ರಿಸಬೇಕು ಎನ್ನುವ ಇಂದಿನ ಪದ್ಧತಿಯಂತೆ ಈ ರಂಗಮಂಟಪದ ಚಿತ್ರವನ್ನು ಸಂಯೋಜನೆ ವರ್ಣವಿನ್ಯಾಸ ಎಲ್ಲಾ ಅಂಶಗಳನ್ನು ಪೂರ್ಣವಾಗಿ ನಿಯೋಜಿಸಲಾಗಿದೆ."[೨೮] ಈ ಮಹಾರಂಗ ಮಂಟಪದಲ್ಲಿ ಚಿತ್ರಚಿತ್ರಗಳನ್ನು ಚಿತ್ರಿಸುವ ಕಲಾವಿದನು ಭಾಗಗಳನ್ನು ಮಾಡಿಕೊಂಡಿದ್ದಾನೆ. ಈ ಭಾಗವನ್ನು ಕಲವಿದನು ಅನುಕೂಲ ಮತ್ತು ವಸ್ತು ರೂಪ ಭೇದ ಕಾರಣದಿಂದ ರಂಗಮಂಟಪದಲ್ಲಿ ಸ್ಥಳಾವಕಾಶ ಮತ್ತು ಪಟ್ಟಿಕೆಯನ್ನು ಮಾಡಿಸಲಾಗಿದೆ. ಈ ರೂಪಭೇದವು ಷಡಂಗದ ಪ್ರಥಮ ಅಂಗವಾಗಿದೆ.

ಸಕ್ರಿಯವಾಗಿ ವಿಷ್ಣು, ಬಲಗಡೆ ಗರುಡ ಮತ್ತು ಎಡಗಡೆ ಹನುಮಂತ ಜೊತೆಗೂಡಿ ಚಿತ್ರಿಸಲ್ಪಟ್ಟಿದ್ದಾರೆ. ಮಧ್ಯದ ಚೌಕದಲ್ಲಿ ಶಿವಪಾರ್ವತಿಯರನ್ನು ನಾರದ ಮತ್ತು ತುಂಬುರ, ವಾಣಿ, ಬ್ರಹ್ಮ ಹಿಮವತ್ ಮತ್ತು ಇನ್ನಿತರ ಚಿತ್ರಗಳಾಗಿವೆ. ಬ್ರಹ್ಮನೇ ಮದುವೆಯ ಪುರೋಹಿತ ಹಿಮವತ್‌ನ್ನು ಭಾವನಾತ್ಮಕದ ಕಥೆಗಳನ್ನು ನೋಡಿ ಗಮನಿಸಿದಾಗ ಅಲ್ಲಿ ಸಾಮಾಜಿಕ ಚಿತ್ರಗಳ ಮೇಲೆ ಅತಿಯಾದ ಅವಲಂಬಿತವಾದ ಚಿತ್ರಣವಾಗಿದೆ. ಸೀತಾರಾಮಕಲ್ಯಾಣ ಚಿತ್ರದಲ್ಲಿ ಸ್ವಯಂವರಕ್ಕೆ ಬಂದು ರಾಜಮಹಾರಾಜರು, ಗಣ್ಯರು, ಋಷಿಮುನಿಗಳು, ದೇವತೆಗಳು, ಗಂಧರ್ವರು, ಯಕ್ಷಿ, ಯಕ್ಷಿಣಿ, ಐರಾವತ, ಕಾಮಧೇನು, ಶಂಭ, ಪಶ್ಚಿಮ ದಿಕ್ಕಿನ ತೊಲೆಯಲ್ಲಿ ವಿರೂಪಾಕ್ಷ, ಗರ್ಭಗೃಹದ ತೋಲೆಯಲ್ಲಿ ವಿರೂಪಾಕ್ಷ ದೇವರ ಮುಖವಾಡದ ಪ್ರತಿರೂಪದಂತೆ ಈ ಚಿತ್ರ. ಇದರ ಎಡಬಲ ಭಾಗಗಳಲ್ಲಿ ನಂದಿ ಪೂಜಾರಿಗಳು, ಋಷಿಮುನಿಗಳು ಇತರ ದೇವತೆಗಳನ್ನು ಕುರಿತು ಹದಿನೆಂಟು ಚಿತ್ರಗಳಿವೆ ಮತ್ತು ನಾಲ್ಕು ಮಂದಿ ಆರೇಳು ಶಿವಲಿಂಗ ಹಾಲು ಕರೆಯುತ್ತಿರುವುದು ಚಿತ್ರವಾಗಿದೆ. ಶಂಭ, ಐರಾವತ, ಕಾಮಧೇನು, ವಿಷ್ಣು ಮಹಿಮೆ ಸಾರುವ ಚಿತ್ರಗಳು, ಕಾರ್ತಿಕೇಯ ಶಿವಗಣಗಳು

ಮತ್ತು ದಕ್ಷಿಣ ತೊಲೆಯ ಮೇಲೆ ಆನೆ ಮತ್ತು ಆಕಳು ಸಂಯುಕ್ತಗೊಂಡ ಚಮತ್ಕಾರಕ ಚಿತ್ರಗಳಾಗಿವೆ. ಮಲ್ಲಯುದ್ಧ (ಗರಡಿ ಕಲೆ), ಸಾಮಾಜಿಕ ಕುಸ್ತಿಕಲೆಯಲ್ಲಿ ಪರಿಣಿತನಾದವನಿಗೆ ಜಟ್ಟಿಮತ್ತ, ಪೈಲವಾನ್ ಎಂತಲು ಅವರು ತಮ್ಮ ದೈಹಿಕ ಶಕ್ತಿ ಸಾಮರ್ಥ್ಯದ ಮೂಲಕ ಹೋರಾಡಿ ಗೆಲ್ಲುವ ಈ ಕ್ರೀಡೆ ಮಲ್ಲಯುದ್ಧ. ಗರಡಿಕಲೆ ಇತ್ಯಾದಿಗಳನ್ನು ಜನಸಾಮಾನ್ಯರ ಮನದಲ್ಲಿ ಪ್ರತಿಬಿಂಬಿಸುವಂತ ಕಲೆಯಾಗಿದೆ. "ಇನ್ನೊಂದು ವಿಜಯನಗರ ಸಾಮ್ರಾಜ್ಯದ ಹಂಪಿ ಪರಿಸರದಲ್ಲಿ ಕಂಡುಬರುವ ಜನಪದದಲ್ಲಿನ ಕೋಲಾಟದ ಉಬ್ಬುಶಿಲ್ಪಗಳು ಹಾಗೂ ನೃತ್ಯವಾಡುತ್ತಿರುವ ಮಹಿಳೆಯರಲ್ಲಿ ಅತೀ ಹೆಚ್ಚಾಗಿ ಕಂಡುಬರುವ ಸಾಮಾಜಿಕ ವಿನ್ಯಾಸವಾಗಿದೆ."[೨೯] ಆದಿಮ ನೆಲೆಗಳ ಹಂಪಿಯ ವಿರೂಪಾಕ್ಷ ದೇವಾಲಯದ ಹಿಂಭಾಗಕ್ಕೆ ಈಗಿನ ಗಾಯತ್ರಿ ಪೀಠದ ಪ್ರದೇಶಕ್ಕೆ ಹೊಂದಿಕೊಂಡಂತೆ ರಸ್ತೆಯ ಬದಿಗೆ ಎರಡು ಬೃಹತ್ ಬಂಡೆಗಳು ಒಂದಕ್ಕೊಂದು ತಲೆ ಅಂಟಿಸಿಕೊಂಡು ಇಲ್ಲಿನ ಅಕ್ಕ-ತಂಗಿಯರ ಕಲ್ಲಿನ ಮಾದರಿಯಂತಿವೆ. ಈ ಕಲ್ಲುಗಳ ಒಳಮೈಯಲ್ಲಿ ಹಲವಾರು ವರ್ಣಚಿತ್ರಗಳು ಕಂಡುಬರುತ್ತವೆ. ಆನೆಗೊಂದಿಯಿಂದ ಪಂಪಸರೋವರಕ್ಕೆ ಹೋಗುವ ದಾರಿಯ ಮಧ್ಯದಲ್ಲಿ ರಾಮಪುರ, ಮಲ್ಲಾಪುರಕ್ಕೆ ಹೋಗುವ ದಾರಿಯಿದೆ. ಈ ದಾರಿಯಲ್ಲಿ ಸುಮಾರು ಎರಡು ಕಿಲೋಮೀಟರ್ ದೂರ ಸಾಗಿದರೆ 'ಒನಕೆ ಕಿಂಡಿ' ಎಂಬ ಸ್ಥಳವಿದೆ. ಮುಖ್ಯರಸ್ತೆಯಿಂದ ಸುಮಾರು ೫೦ ಮೀಟರ್ ಅಂತರದಲ್ಲಿ ರಸ್ತೆಯಿಂದ ಎಡಬದಿಗೆ ಕಂಡುಬರುತ್ತದೆ. (ಆದಿಮ ನೆಲೆಗಳು) ಹಾಗೂ ವಿಜಯನಗರದ ರಾಜಧಾನಿಯ ಸ್ಥಳವಾದ ಹಂಪಿ ಪೌರಾಣಿಕ ಹಾಗೂ ಧಾರ್ಮಿಕ, ಸಾಮಾಜಿಕ, ಮತ್ತೆ ಪುಣ್ಯಕ್ಷೇತ್ರದ ಹಿನ್ನೆಲೆಯಲ್ಲಿ ರಾಮಾಯಣದ ಕಿಷ್ಕಿಂದ ಪ್ರದೇಶವಾಗಿ ಸೃಷ್ಟಿ ಪುರಾಣಗಳ ನೆಲೆಯಾಗಿ ಪಂಪಾಕ್ಷೇತ್ರವಾಗಿ ಪ್ರಾಚೀನತೆಯನ್ನು ಪಡೆದುಕೊಂಡಿದೆ. ಹಂಪಿಯ ಪರಿಸರದ ಸಾಮಾಜಿಕ ಹಿನ್ನೆಲೆಯಲ್ಲಿ ಮಿಥುನ ಶಿಲ್ಪಗಳು ಸಾಮಾಜಿಕ ದೃಷ್ಟಿಯಿಂದ ಕೆಟ್ಟವೆನಿಸಿದರೂ ಜನಪದರಲ್ಲಿ ಜೋಕುಮಾರ ಪೂಜೆಗೆ ಅರ್ಹನಾದ ದೈವ ಮಕ್ಕಳಿಲ್ಲದವರಿಗೆ ಮಕ್ಕಳು ನೀಡುವ ದೇವರಾಗಿ ಪೂಜೆಗೊಳ್ಳುತ್ತದೆ. ಹಾಗಾಗಿ ಆತನ ಮೂರ್ತಿ ರಚನೆಯಲ್ಲಿ ಜನಪದದ ತಮ್ಮ ಭಾವನೆಗಳನುಸಾರವಾಗಿ ದೇಹಕ್ಕಿಂತಲೂ ದೊಡ್ಡ ಶಿಶ್ನದ ಮಾಡುತ್ತಾರೆ. ಶಿಶ್ನ ರಚನೆಗೆ ಮಹತ್ವದ ಗಮನವಿಟ್ಟು ಪೂಜೆಗೆ ಅನುವುಗೊಳಿಸುತ್ತಾರೆ.

ಹಂಪಿಯಲ್ಲಿ ವಾಸಿಸುವ ಸಮಾಜದಲ್ಲಿ ಜನಸಾಮಾನ್ಯರಲ್ಲಿ ಪ್ರತಿಬಿಂಬಿಸುವ ಮತ್ತು ಸಾಮಾಜಿಕ ಹಿನ್ನೆಲೆಯಲ್ಲಿ ಕೃಷಿ, ವ್ಯಾಪಾರ, ಅಂಗಡಿ, ವಿದೇಶಿಯರಿಗೆ ಬೇಕಾದ ಅನೇಕ ನಿಲಯಗಳು, ಸಂಗೀತ, ಕಲೆ, ಸಾಹಿತ್ಯ, ಚಿತ್ರಕಲೆ, ನೃತ್ಯ, ಜನಪದನೆಲೆ ಹಾಗೂ ವಿಜಯನಗರದ ನಾಣ್ಯಗಳ ಅಳವಡಿಕೆಯಲ್ಲಿ ಅಥವಾ ಬಳಕೆಯ ವಿಧಾನ ಸಾಮ್ರಾಜ್ಯದ ನಾಣ್ಯಗಳ ಸ್ವರೂಪ ಹಾಗೂ ಇತಿಹಾಸವನ್ನು ತಿಳಿಯಲು ಉಪಯುಕ್ತವಾದದು."[೩೦] ರಾಜಕೀಯ, ಸಾಮಾಜಿಕ, ಧಾರ್ಮಿಕ, ಆರ್ಥಿಕ ಹಿನ್ನೆಲೆಯನ್ನು ತಿಳಿಯುವುದು ಮಾತ್ರವೇ ನಮ್ಮ ಮುಖ್ಯ ಉದ್ದೇಶವಾದ ವಿಷಯವೂ ಆಗಿರುತ್ತದೆ.

ಯಾಕೆಂದರೆ ನಾಣ್ಯಗಳು ಒಂದು ಸಾಮ್ರಾಜ್ಯದ ರಾಜಕೀಯ ಮತ್ತು ಸಾಂಸ್ಕೃತಿಕ ಚೌಕಟ್ಟಿನಲ್ಲ ಮಾತ್ರ ಅರ್ಥಪೂರ್ಣವಾಗಿ ಕಂಡುಬರುತ್ತದೆ. ನಾಣ್ಯಗಳ ಮೇಲಿನ ಬರವಣಿಗೆಯಾಗಲೀ, ಚಿಹ್ನೆಗಳಾಗಲೀ

ದೇವ, ದೇವತೆಗಳಾಗಲೀ ಆ ಕಾಲದ ಸಂಸ್ಕೃತಿಯನ್ನು ಪ್ರತಿಬಿಂಬಿಸುತ್ತದೆ. ಹಿಂದೂ ಧರ್ಮವನ್ನು ಪುನಃ ಪ್ರತಿಷ್ಠಾಪಿಸುವುದೇ "ವಿಜಯನಗರ ಸಾಮ್ರಾಜ್ಯದ ಸ್ಥಾಪನೆಯ ಮುಖ್ಯ ಉದ್ದೇಶವಾಗಿತ್ತೆಂದು ಬಹುಮಂದಿ ಇತಿಹಾಸಕಾರರು ಹೇಳಿದ್ದಾರೆ. ವಿಜಯನಗರ ಸಾಮ್ರಾಜ್ಯವು ಆರ್ಥಿಕವಾಗಿ ಸುಭದ್ರವಾದ ತಳಹದಿಯ ಮೇಲೆ ನಿಂತಿದ್ದಿತೆಂದು ಶಾಸನಗಳಿಂದ ಹಾಗೂ ವಿದೇಶಿಯರ ಬರವಣಿಗೆಗಳಿಂದ ಗೊತ್ತಾಗುತ್ತದೆ. ಈ ಆರ್ಥಿಕ ಪ್ರಗತಿಯ ಅವರ ನಾಣ್ಯ ಪದ್ಧತಿಯಲ್ಲಿ ಪ್ರತಿಬಿಂಬಿತವಾಗಿರುವುದು ಸುಲಭವಾಗಿ ಗುರುತಿಸಬಹುದಾದ ಸಂಗತಿ. ಇದು ಧಾರ್ಮಿಕ ಜೀವನದಲ್ಲಿ ಒಂದು ರೀತಿಯ ಸಾಮರಸ್ಯ ಈ ಕಾಲದಲ್ಲಿ ವಿಶೇಷವಾಗಿ ಕಂಡುಬಂದವು."[೩೧] ವಿಜಯನಗರದ ಅರಸರು ಚಿನ್ನ, ಬೆಳ್ಳಿ ಮತ್ತು ತಾಮ್ರಗಳ ನಾಣ್ಯಗಳನ್ನು ಟಂಕಿಸಿದರು. ನಾಣ್ಯಗಳ ಚಿಹ್ನೆಗಳು ಹೇರಳವಾಗಿದ್ದುದು ಮಾತ್ರವಲ್ಲದೆ, ರಾಜ್ಯದ ಬೊಕ್ಕಸದ ಆದಾಯ ಹಾಗೂ ಪ್ರಮುಖ ದಾನಗಳು ಈ ನಾಣ್ಯಗಳ ಮೂಲಕ ನಡೆಯುತ್ತಿದ್ದವು. ಆದರೆ ಕೆಲವು ಶಾಸನಗಳ ಪ್ರಕಾರ ಚಿನ್ನದ ಶುದ್ಧತೆಯು ಶೇಕಡ ೮೦ ರಿಂದ ೯೦ ರವರೆಗೆ ಇದ್ದಿತು. ಚಿಹ್ನೆಗಳು ಗದ್ಯಾಣ, ವರಹ, ಪೊನ್, ಪಗೋಡ, ಪ್ರತಾಪ, ಕಾಟ, ಪಣ, ಚಿನ್ನ, ಮಾಡ, ಹಾಗ, ವೀಸ, ಬೆಳೆ, ರೂಕ ಮತ್ತು ಕಾಸು ಈ ಕಾಲದ ನಾಣ್ಯಗಳ ಹೆಸರುಗಳಾಗಿದ್ದವು. ಹೀಗೆ ಹಂಪಿಯ ಪರಿಸರದಲ್ಲಿ ಮತ್ತು ಸಾಮಾಜಿಕ ಹಿನ್ನೆಲೆಯ ಇತಿಹಾಸವು ಅನೇಕ ಕಲೆ, ಚಿತ್ರಕಲೆ, ಸಾಹಿತ್ಯ, ಜನಪದ, ಸಮಾಜಕ್ಕೆ ಬಿಂಬಿಸುವಂತಹ ಅನೇಕ ದೇವಾಲಯಗಳು, ಮಂಟಪಗಳು, ಪೌರಾಣಿಕ ನೆಲೆ, ಚಾರಿತ್ರಿಕ ನೆಲೆ, ಸಾಮಾಜಿಕ ನೆಲೆ, ಧಾರ್ಮಿಕ ನೆಲೆ, ರಾಜಕೀಯ ನೆಲೆ, ಸಾಂಸ್ಕೃತಿಕ ನೆಲೆ, ಬೇಟೆ, ಆದಿಮ ಶಿಲ್ಪಕಲೆಗಳು, ಕೋಲಾಟದ ಕಲೆ ಕೆಲವೊಂದು ಆಚರಣೆಯ ದಿನಗಳು, ಹಬ್ಬಹರಿದಿನಗಳ ಬಳಕೆ, ಮಲ್ಲಯುದ್ಧಗಳು, ಮಿಥುನಕಲೆಗಳು ಹೀಗೆ ಹಂಪಿಯ ಸ್ಮಾರಕಗಳ ನೆಲೆಯು ಸಾಮಾಜಿಕ ಹಿನ್ನೆಲೆಯಾಗಿ ಇತಿಹಾಸದ ರೀತಿ ನೀತಿಯಾದ ಕಥೆಗಳಾಗಿ ಬೆಳೆದು ವಿಜಯನಗರ ಸಾಮ್ರಾಜ್ಯದ ಸಾಮಾಜಿಕ ಹಿನ್ನೆಲೆಯಾಗಿದೆ.

"ವಿಜಯನಗರದ ಬೋಗಾಪೇಕ್ಷೆಗಳಾದ ಅರಸರು ವೇಶ್ಯಾವಾಟಿಕೆಗೆ ರಹಸ್ಯವಾಗಿ ಅನಧಿಕೃತವಾಗಿ ಬೇಟೆ ಕೊಡುವುದರೊಡನೆ ವೇಶ್ಯಾಪದ್ಧತಿ ರಾಜಾಶ್ರಯದಲ್ಲಿ ವ್ಯವಸ್ಥಿತವಾಗಿ ಬೆಳೇಯುವಂತೆ ಪ್ರೋತ್ಸಾಹಿಸಿದರು."[೩೨] ವಿಜಯನಗರದಲ್ಲಿ ಇಂಥಾ ವ್ಯವಸ್ಥೆ ಬೆಳೆಯಲು ಇದ್ದ ಕಾರಣಗಳೆಂದರೆ ಜನರ ಆರ್ಥಿಕ ದುಸ್ಥಿತಿ ಹಾಗೂ ಕೆಲವು ಅಮಾನವೀಯ ಸಾಮಾಜಿಕ ಕಟ್ಟುಪಾಡುಗಳು. ವಿಜಯನಗರದಲ್ಲಿ ಇದು ಸಾಂಸ್ಥಿಕ ಸ್ವರೂಪ ಪಡೆದುಕೊಂಡಿದ್ದಿತೆಂದರೆ ಇದರ ಭೀಕರತೆಯ ಪರಿಚಯವಾಗುತ್ತದೆ. ಇದು ಧಾರ್ಮಿಕ ನೆಲೆಯಲ್ಲಿ ದೇವರ ಹೆಸರಿನಲ್ಲಿ ಅಂಗೀಕರಿಸಲ್ಪಟ್ಟಿದದಿತು. ಅಚ್ಯುತಪೇಟೆ/ ಬಜಾರನ್ನು 'ಸೂಳೆಬಜಾರ್' ಎಂತಲೇ ಕರೆಯಲಾಗಿದ್ದಿತು. ಈ ಪದ್ಧತಿಯನ್ನು ಪ್ರೋತ್ಸಾಹಿಸಿದ ಎರಡು ಮಹಾಪಿಡುಗುಗಳೆಂದರೆ ಮಧ್ಯಪಾನ ಮತ್ತು ಜೂಜುಗಾರಿಕೆ. "ವಿಜಯನಗರ ಕಾಲದ ಕೆಲವು ಕನ್ನಡ ಕಾವ್ಯಗಳು ಇಂತಥಾ ವ್ಯಸನಗಳನ್ನು ರಂಜನೀಯವಾಗಿ ವರ್ಣಿಸುತ್ತವೆ. ಪ್ರವಾಸಿ ಅಬ್ದುಲ್ ರಜಾಕ್‌ನು ಈ ನಗರವನ್ನು ವರ್ಣಿಸುತ್ತ ಕೋಟೆಗಳಲ್ಲಿ ಈ ತರಹದ ಅನೇಕ ವೇಶ್ಯಾಗೃಹಗಳಿವೆ."[೩೩] ಈ ವೇಶ್ಯಾ

ಗೃಹಗಳ ಮೇಲೆ ಹಾಕಿದ ತೆರಿಗೆಯಿಂದ ೧೨೦೦೦ ಪಣಂ ಆದಾಯ ಬರುತ್ತದೆ. ಈ ಹಣವನ್ನು ಪಹರೆಯವರಿಗೆ ಸಂಬಳವಾಗಿ ಕೊಡುತ್ತಿದ್ದರೆನ್ನುತ್ತಾರೆ. ಈ ವಿಜಯನಗರ ರಾಜಧಾನಿಯ ರಕ್ಷಣೆ ಸಂಪೂರ್ಣವಾಗಿ ವೇಶ್ಯೆಯರು ನೀಡುತ್ತಿದ್ದ ತೆರಿಗೆಯನ್ನು ಅವಲಂಬಿಸಿದ್ದಿತೆಂಬುದು ಸ್ಪಷ್ಟವಾಗಿದೆ. ಮನುಷ್ಯರನ್ನು ಮತ್ತು ಪ್ರಾಣಿಗಳನ್ನು ಬಲಿ ನೀಡುವ ಇನ್ನೊಂದು ಭಯಾನಕ / ಅನಿಷ್ಟಪದ್ಧತಿ ವಿಜಯನಗರದಲ್ಲಿ ಬೇರೂರಿದ್ದಿತು. ಇದು ತೀರಾ ವ್ಯಾಪಾರೀಕರಣದ ಆಚರಣೆಯಾಗಿದೆ ಎನ್ನಲು ಸಾಕಷ್ಟು ಉದಾಹರಣೆಗಳಿವೆ. ಕೆರೆಗಳನ್ನು, ಕೋಟೆಗಳನ್ನು ಕಟ್ಟುವಾಗಲಂತೂ ಮನುಷ್ಯರನ್ನು ಜೀವಂತವಾಗಿ ಆಹುತಿ ನೀಡುವುದು. ಇನ್ನೊಂದು ಉದಾಹರಣೆ ವಿರೂಪಾಕ್ಷ ದೇವಾಲಯದ ಮಹಾದ್ವಾರ ವಿಷ್ಟಪ್ಪಯ್ಯನ ಗೋಪುರಕ್ಕೆ ರಂಗಾಪುರದ ಲಕ್ಷ್ಮಾಂಬೆ ಎಂಬುವವಳನ್ನು ಬಲಿ ನೀಡಲಾಗಿತ್ತು. ಇನ್ನೊಂದು ಉದಾಹರಣೆ ಈ ಬಾಗಿಲ ಬಳಿ 'ಗೋಪುರಾಂಬ' ಹೆಸರಿನಲ್ಲಿ ಈಕೆಯ ಸ್ಮರಣಾರ್ಥ ವಿಗ್ರಹ ಸ್ಥಾಪಿಸಿದ ವಿಚಾರ ತಿಳಿಯುತ್ತದೆ. ಹೀಗೆ ಸಾಮಾಜಿಕ ಜೀವನದ ಹಿನ್ನೆಲೆಯ ವಿಷಯದ ಮುಖ್ಯ ಲಕ್ಷಣವಾಗಿದೆ.

**ಅಡಿಟಿಪ್ಪಣಿಗಳು**

೧. ಚಲುವರಾಜು, ಹಂಪಿ ಸ್ಮಾರಕಗಳಲ್ಲಿ ಜಾನಪದೀಯ ಅಂಶಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦, ಪು.೨-೩

೨. ಅದೇ ಪು.೪

೩. ಶ್ರೀನಿವಾಸ ಎಸ್., ಹಂಪಿ ಪರಿಸರದ ಆದಿಮಾನವ ನೆಲೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦, ಪು.೭

೪. ಅದೇ ಪು.೮

೫. ಅದೇ ಪು.೯

೬. ಶ್ರೀನಿವಾಸ, ಹಂಪಿ ಪರಿಸರದ ಆದಿಮಾನವ ನೆಲೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦, ಪು.೧

೭. ವಾಸುದೇವನ್ ಸಿ.ಎಸ್., ಹಂಪಿ ಪರಿಸರದ ಶೈವ ಶಿಲ್ಪಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦, ಪು.೪೩

೮. ಸಂಕಾಲಿಯಾ ಹೆಚ್.ಡಿ., ಇತಿಹಾಸದ ಕಣ್ಣಲ್ಲಿ ರಾಮಾಯಣ, ನವಕರ್ನಾಟಕ ಪ್ರಾಧಿಕಾರ, ಬೆಂಗಳೂರು, ೧೯೯೦, ಪು.೧೫

೯. ಚಲುವರಾಜು, ಹಂಪಿ ಸ್ಮಾರಕಗಳಲ್ಲಿ ಜಾನಪದೀಯ ಅಂಶಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦, ಪು.೨

೧೦. ಅದೇ ಪು.೩

೧೧. ವಾಸುದೇವನ್ ಸಿ.ಎಸ್., ಹಂಪಿ ಪರಿಸರದ ಶೈವ ಶಿಲ್ಪಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦, ಪು.೨೦

೧೨. ವಾಸುದೇವನ್ ಸಿ.ಎಸ್., ಹಂಪಿ ಪರಿಸರದ ಶೈವ ಶಿಲ್ಪಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦, ಪು.೪೩

೧೩. ಅದೇ, ಪು.೪೫

೧೪. ಕೊಟ್ರಯ್ಯ ಸಿಟಿಯಂ, ಚಾಲುಕ್ಯ ಅರಸರ ಶಾಸನಗಳು ಮತ್ತು ಹಂಪಿ ವಿಜಯನಗರ ಅಧ್ಯಯನ, ಸಂ.೨, ಪು.೫೪

೧೫. ದೇವರಕೊಂಡಾರೆಡ್ಡಿ, ಪಂಪಾತೀರ್ಥ, ವಿಜಯನಗರ ಅಧ್ಯಯನ, ಪ್ರಾಚ್ಯವಸ್ತು ಸಂಗ್ರಹಾಲಯ ನಿರ್ದೇಶನಾಲಯ, ಹೊಸಪೇಟೆ, ೨೦೦೩, ಸಂ.೨, ಪು.೫೪

೧೬. ದೇವರಕೊಂಡಾರೆಡ್ಡಿ, ಪಂಪಾತೀರ್ಥ, ವಿಜಯನಗರ ಅಧ್ಯಯನ, ಪ್ರಾಚ್ಯವಸ್ತು ಸಂಗ್ರಹಾಲಯ ನಿರ್ದೇಶನಾಲಯ, ಹೊಸಪೇಟೆ, ೨೦೦೩, ಸಂ ೩, ಪು. ೮೯

೧೭. ಅದೇ ೯೩

೧೮. ಕೊಟ್ರಯ್ಯ ಸಿಟಿಯಂ, ಹಂಪಿ ಶಿಲಾಯುಗ ಸಂಸ್ಕೃತಿ ಕ್ರಿಸ್ತಶತಾಬ್ಧಿ ಆರಂಭ ಶಾಸನಗಳಲ್ಲಿ ಅಧ್ಯಯನ, ಪು.೯–೧೩

೧೯. ದೇವರಕೊಂಡಾರೆಡ್ಡಿ, ಹಂಪಿಯಲ್ಲಿ 'ಬಾದಾಮಿ ಚಾಲುಕ್ಯರ ವಿಜಯನಗರ ಕಾಲದ ದೇವಾಲಯಗಳು', ಪ್ರಾಚ್ಯವಸ್ತು ಸಂಗ್ರಹಾಲಯ, ಹೊಸಪೇಟೆ, ಸಂ.೧, ೨೦೦೪, ಪು.೩೮

೨೦. ವಿವೇಕ ರೈ ಬಿ.ವಿ., ಪ್ರವಾಸಿ ಕಂಡ ವಿಜಯನಗರ, ಪು.೯

೨೧. ಅದೇ ಪು. ೩

೨೨. ದೇಸಾಯಿ ಪಿ.ಬಿ., ಪೂರ್ವೋಕ್ತ, ಪು.೭೨

೨೩. ಪರಮ ಶಿವಮೂರ್ತಿ ಡಿ.ಎ., ಕೃಷ್ಣದೇವರಾಯನ ಶಾಸನಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೧೬

೨೪. ಚಲುವರಾಜು, ಹಂಪಿ ಸ್ಮಾರಕಗಳಲ್ಲಿ ಜಾನಪದೀಯ ಅಂಶಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦, ಪು.೭–೮

೨೫. ಗೋಪಾಲ್ ಆರ್., ಶ್ರೀಕೃಷ್ಣದೇವರಾಯನ ಜೀವನ ಮತ್ತು ಸಾಧನೆ, ಪ್ರಾಚ್ಯವಸ್ತು ಸಂಗ್ರಹಾಲಯ, ಮೈಸೂರು, ೨೦೦೪, ಪು.೧೨೮

೨೬. ನರಸಿಂಹಮೂರ್ತಿ ಎ.ವಿ., ವಿಜಯಗರದ ನಾಣ್ಯ ಗೃಹ, ಸರಸ್ವತೀ ಗ್ರಂಥಮಾಲೆ, ಮಾನಸ ಗಂಗೊತ್ರಿ ಮೈಸೂರು, ೧೯೯೬, ಪು.೨, ೬–೭, ೨೦

೨೭. ಗೋಪಾಲ್ ಆರ್., ಶ್ರೀಕೃಷ್ಣದೇವರಾಯನ ಜೀವನ ಮತ್ತು ಸಾಧನೆ, ಪ್ರಾಚ್ಯವಸ್ತು ಸಂಗ್ರಹಾಲಯ, ಮೈಸೂರು, ೨೦೦೪, ಪು.೧೨೮

೨೮. ಅದೇ ಪು.೧೨೯

೨೯. ಶ್ರೀನಿವಾಸ ಎಲ್., ಹಂಪಿ ಪರಿಸರದ ಆದಿಮಾನ ನೆಲಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦, ಪು.೭

೩೦. ಅದೇ ಪು.೮

೩೧. ಚಲುವರಾಜು, ಹಂಪಿ ಸ್ಮಾರಕಗಳಲ್ಲಿ ಜಾನಪದೀಯ ಅಂಶಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦, ಪು.೭–೮

೩೨. ಕೃಷ್ಣವೇಣಿ, ಬಳ್ಳಾರಿ ಜಿಲ್ಲೆಯ ಚಿತ್ರಕಲೆ, (ಪ್ರಕಟಿತ ಸಂಪ್ರಬಂಧ) ೨೦೦೮, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೧೪೯

೩೩. ರಾಮಕೃಷ್ಣ ಆರ್., ವಿಜಯನಗರ ಅಧ್ಯಯನ, ಸಂಪುಟ–೯, ೨೦೦೪, ಪು.೧೩ (ಪ್ರಾಚ್ಯ ವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಹೊಸಪೇಟೆ)

ಅಧ್ಯಾಯ : ಮೂರು

# ಹಂಪಿ ಪರಿಸರದ ಚಿತ್ರ ಮತ್ತು ಶಿಲ್ಪಕಲೆಗಳು

ಅಧ್ಯಾಯ : ಮೂರು

# ಹಂಪಿ ಪರಿಸರದ ಚಿತ್ರ ಮತ್ತು ಶಿಲ್ಪಕಲೆಗಳು

**ಪೀಠಿಕೆ**

ಪ್ರಾಗೈತಿಹಾಸಿಕ ಕಾಲದ ವಿವಿಧ ಕಾಲಘಟ್ಟಗಳಲ್ಲಿ ಜೀವಿಸಿದ ಆದಿಮಾನವರ ಹಲವಾರು ಕುರುಹುಗಳು ಭಾರತದಲ್ಲಿ ದೊರೆತಿವೆ, ಕರ್ನಾಟಕವೂ ಇದಕ್ಕೆ ಹೊರತಾಗಿಲ್ಲ, ಅಂದಿನ ದಖ್ಖನ್ ಪ್ರಸ್ಥಭೂಮಿಗೆ ಸೇರಿದ ಕರ್ನಾಟಕವು ಭೌಗೋಳಿಕವಾಗಿ ಆಯಕಟ್ಟಿನ ಭಾಗದಲ್ಲಿದೆ. ಪ್ರಾಚೀನ ಕಾಲದಿಂದಲೂ ಹಂಪಿ ಸುತ್ತಮುತ್ತಲೂ ಆದಿಮಾನವನ ಜೀವನೋಪಾಯದ ಚಟುವಟಿಕೆಗಳು ಆರಂಭವಾಗಿರುವುದನ್ನು ಇಲ್ಲಿ ಗುರುತಿಸಲಾಗಿದೆ. ಆದಿಮಾನವ ನಿಸರ್ಗದಲ್ಲಿ ದೊರೆಯುವ ಆಹಾರ ಸಂಪಾದನೆಯ ಹಂತದಲ್ಲಿದ್ದರೂ ನೈಸರ್ಗಿಕ ರಕ್ಷಣೆಯ ಸ್ಥಳಗಳಲ್ಲಿ ಇರುತ್ತಿದ್ದನೆಂಬುದು ತಿಳಿದು ಬರುತ್ತದೆ. ಆಹಾರಕ್ಕಾಗಿ ಬೇಟೆಯಾಡಲು ಬೇಕಾದ ಸಲಕರಣೆಗಳನ್ನು ತಾವೇ ತಯಾರಿಸಿಕೊಂಡಿರುವುದು ಹಂಪಿಯ ಪರಿಸರದಲ್ಲಿ ದೊರೆತ ಕುರುಹುಗಳಿಂದ ತಿಳಿಯಬಹುದಾಗಿದೆ. ನಿಸರ್ಗದಲ್ಲಿದುಕೊಂಡೆ ತಮಗೆ ಅವಶ್ಯಕವಾಗಿ ಬೇಕಾದ ಏಕಮುಖ ಹಾಗೂ ದ್ವಿಮುಖ ಮಚ್ಚು, ಕತ್ತಿ, ದುಂಡು ಕಲ್ಲು, ಕಲ್ಲಿನ ಚೆಕ್ಕೆಗಳನ್ನು ಎಬ್ಬಿಸುವ ಉಪಕರಣಗಳು, ಕೈಕೊಡಲಿ, ಸೀಳುಗತಿ ಇತ್ಯಾದಿ ಉಪಕರಣಗಳು ದೊರೆತಿವೆ ಮತ್ತು ಎರಡು ಪ್ರಕಾರದ ಆಯುಧಗಳು, ಕೈಕೊಡಲಿ ಮತ್ತು ಹೆರೆಯುವ ಉಪಕರಣಗಳು ವರ್ಣಕ್ಕೆ ಸೇರಿದೆ, ಮತ್ತು ಗವಿಯಲ್ಲಿ ಚೆಕ್ಕೆ ಕಲ್ಲಿನ ದುಂಡು ಕಲ್ಲನ್ನು ಚಕ್ರಸವಿತದ ಹಾಗೆ ಪ್ರಾಣಿಗಳಿಗೆ ಗುರಿ ಇಟ್ಟು ಹೊಡೆಯಲು ಉಪಯೊಗಿಸುವ ಚಿತ್ರಗಳನ್ನು ಗುರ್ತಿಸಬಹುದು.

ಹಾಗೆ ಹಂಪಿ ಪ್ರದೇಶದಲ್ಲಿನ ತುಂಗಭದ್ರ ನದಿ ಕಣಿವೆ ಬಯಲಿನ, ವಿಜಯನಗರಕ್ಕೆ ಪೂರ್ವದ ಆದಿಯ ಸಂಸ್ಕೃತಿಯ ಹಲವಾರು ವಿಚಾರಗಳು ದೊರೆಯುತ್ತಾವೆ. ಅದಕ್ಕೆ ಸಂಬಂಧಪಟ್ಟ ಆದಿಮಾನವರು ವಾಸವಾಗಿದ್ದ ಗವಿಯಲ್ಲಿ ವರ್ಣಚಿತ್ರಗಳು ಅವರ ಬಳಸಿದ ಆಯುಧಗಳು ಮತ್ತು ಆನೆಗೊಂದಿಯ ಅನೇಕ ಕಿಂಡಿ ಪ್ರದೇಶದಲ್ಲಿ ದೊರಕುವ ಚಕುಮಿಕಿ ಕಲ್ಲು ಅಂದರ ಕಲ್ಲುನ್ನು ಬಳಸಿದ ಶಿಲಾಯುಗದ ಕಾಲವನ್ನು ಗುರುತಿಸಲಾತ್ತದೆ. ಆದ್ದರಿಂದ ಹಂಪಿ ಪರಿಸರ ವ್ಯಾಪ್ತಿಗೆ ಸಂಬಂಧಿಸಿದ, ಗವಿವರ್ಣ ಚಿತ್ರಗಳು ಜನ ಸಾಮಾನ್ಯರಲ್ಲಿ ಹಾಗೂ ಇತಿಹಾಸವನ್ನು ಸೃಷ್ಟಿಸಿರುವಂತಹ ನೆಲೆಯನ್ನು ಕಂಡುಕೊಳ್ಳುವ ವಿಧಿ ವಿಧಾನಗಳಾಗಿವೆ.

### ೩.೧. ಗವಿವರ್ಣಚಿತ್ರ

"ಆದಿಮಾನವನು ತಾನು ವಾಸಿಸುತ್ತಿದ್ದ ಗವಿಗಳು ಇಲ್ಲವೇ ತಾತ್ಕಾಲಿಕವಾಗಿ ಆಶ್ರಯ ಪಡೆದಿದ್ದ ಕಲಾಸರೆಗಳು ಚಾವಣಿಗಳಲ್ಲೋ ಗೋಡೆಗಳಲ್ಲೋ ಚಿತ್ರಗಳನ್ನು ಬಿಡಿಸಿರುವುದು ಕಂಡುಬರುತ್ತವೆ."[೧] ಕೆಲವು ಗವಿಗಳಲ್ಲೂ ಸಮೂಹ ನೃತ್ಯ, ಪ್ರಾಣಿಗಳ ಸಾಲುಗಳು, ಮನುಷ್ಯರ ಜೋಡಿಗಳು ಇರುತ್ತವೆ. ಮನುಷ್ಯರು ನಿಂತು ಭಂಗಿಯಲ್ಲಿರುವುದು ಸರ್ವ ಸಾಮಾನ್ಯ ಮನುಷ್ಯರ ಮತ್ತು ಪ್ರಾಣಿಗಳ ಚಿತ್ರಗಳನ್ನು ಕೇವಲ ಬಾಹ್ಯ ರೇಖೆಗಳಿಂದ ಮಾತ್ರ ತೋರಿಸಲಾಗಿರುತ್ತದೆ. ಗವಿವರ್ಣ ಚಿತ್ರಗಳು ಸಾಮಾಜಿಕ ಮತ್ತು ಧಾರ್ಮಿಕತೆಯಲ್ಲಿ ಒಳಪಡುವ ವರ್ಣವಿನ್ಯಾಸಗಳನ್ನು ಕೆಲವು ಚಿಹ್ನೆಗಳು, ಕಣ್ಣು, ಕಿವಿ ಮೂಗು ಮತ್ತು ಬಾಹ್ಯ ಅಪರೂಪವಾಗಿ ಕೈಬೆರಳು, ಹಸ್ತ, ಪಾದಗಳನ್ನು ಸಹ ಸೂಚಿಸಿರುತ್ತವೆ, ಈ ಬಾಹ್ಯ ರೆಂಬೆಗಳ ಒಂದು ಭಾಗವನ್ನು ಹಲವೆಡೆಗಳಲ್ಲಿ ಬಣ್ಣದಿಂದ ತುಂಬಲಾಗಿರುತ್ತದೆ. ಇಂತಹ ಚಿತ್ರಗಳಲ್ಲಿ ಪ್ರಾಣಿ ಮನುಷ್ಯನ ನೆರಳು ಇದ್ದಂತೆ ಇವು ಇರುತ್ತವೆ. "ಈ ಆಕೃತಿಗಳು ಒಂದು ನಿರ್ದಿಷ್ಟ ಪ್ರಮಾಣದಲ್ಲಿರುವುದಿಲ್ಲ. ಕೇವಲ ಒಂದೆರಡು ಅಥವಾ ಕೆಲವು ಚಿತ್ರಗಳಿರಬಹುದು, ಅಥವಾ ಹಲವಾರು ಚಿತ್ರಗಳು ಇರಬಹುದು. ಎಲ್ಲಾ ಚಿತ್ರಗಳು ಒಂದು ಕಾಲದವಲ್ಲ ಆದ್ದರಿಂದ ವಿವಿಧ ಪ್ರಮಾಣದ ಆಕೃತಿಗಳ ನಿರೂಪಣೆಯಲ್ಲೂ ಸ್ವಲ್ಪ ಭಿನ್ನತೆ ಇರುತ್ತದೆ."[೨] ಈ ಚಿತ್ರಗಳು ಹೆಚ್ಚಾಗಿ ಕೆಮ್ಮಣ್ಣಿನ ಬಣ್ಣದಲ್ಲಿರುತ್ತವೆ, ಬಣ್ಣದ ಛಾಯೆಯು ಕಾಲ ವೈಪರಿತ್ಯದಿಂದ ಹಾಗೂ ಇತರೆ ಕಾರಣಗಳಿಂದ ಒಂದೇ ಸಮನಾಗಿರುವುದಿಲ್ಲ ಅಪರೂಪವಾಗಿ ಕಾಡಿಗೆ ಕಪ್ಪು ಹಾಗೂ ಮಿಶ್ರ ಹಳದಿ, ಹಸಿರು, ಬಿಳಿ ಅಥವಾ ದ್ವಿವರ್ಣಗಳಲ್ಲಿಯೂ ಚಿತ್ರಗಳು ಈ ವಿಜಯನಗರದಲ್ಲಿ ಕಂಡುಬರುತ್ತದೆ. ಆದಿಮಾನವನು ಪರಿಕಲ್ಪನೆಯಲ್ಲಿ ಪ್ರಕೃತಿಯ ಪ್ರಾಣಿ ಪಕ್ಷಿಗಳ ಚಿತ್ರಗಳನ್ನು ಚಿತ್ರಿಸಲಾಗಿದೆ ಎಂದು ಹೇಳಬೇಕಾಗುತ್ತದೆ. ಆದಿಮನಸ್ಸು ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಅಲೆಯುವಾಗ ಅಲ್ಲಿ ಆ ಕೃತಿಗಳನ್ನು ಬಿಡಿಸಿರುತ್ತಾನೆ.

**ಹಂಪಿಯ ಪರಿಸರದ ಸುತ್ತಲಿನ ಗವಿಗಳ ಚಿತ್ರಗಳು:**

"ಇದು ತುಂಗಭದ್ರಾ ನದಿ ಹತ್ತಿರದಲ್ಲಿ ಮೊಸಳಯ್ಯನ ಗುಡ್ಡದ ಸಮೀಪ ಸುಗ್ರಿವ ಗುಡಿಯ ಹಿಂದೆ ಇದೆ. ಇಲ್ಲಿ ಕ್ರಮವಾಗಿ ಬಾಣದ ಮನೆಯಂತಿರುವ ರೇಖಾಚಿತ್ರ, ಅನೇಕ ರೇಖೆಗಳು, ಭಾಗಶಃ ನಾಶವಾಗಿರುವ ಮನುಷ್ಯನ ಚಿತ್ರ ಮತ್ತು ಮೊಸಳೆ, ಹಡಗಿನ ಭಾಗ, ಜೋಡಿ ಕಣ್ಣುಗಳು ಇಷ್ಟು ಚಿತ್ರಗಳಿವೆ. ಚಿತ್ರ ಭಾಗ ೪ ಮೀ. ಮತ್ತು ೩ ಮೀ ಅಳತೆಯಲ್ಲಿದೆ ಇವುಗಳಲ್ಲಿ ಮನುಷ್ಯನ ಚಿತ್ರ ಸಹ ಗಮನಾರ್ಹವಾಗಿದೆ."[೩] ಮನುಷ್ಯ ಚಿತ್ರವು ದೊಡ್ಡ ಅಳತೆಯಲ್ಲಿದೆ. ಪಾರ್ಶಬದಿಯಲ್ಲಿದೆ. ತಲೆ ತೀರಾ ಸಣ್ಣಾಗಿದೆ ಮತ್ತು ಬಲಗೈಯನ್ನು ಮೇಲಕ್ಕೆತ್ತಿದೆ. ಮತ್ತೊಂದು ಕೈ ಕಾಣಿಸುವುದಿಲ್ಲ ಮೈ ಮೇಲೆ ಆನೇಕ ರೇಖೆಗಳಿವೆ. ಕಾಲುಗಳನ್ನು ಮುಂದಕ್ಕೆ ಬಾಗಿಸಿ ನಿಂತಂತಿದೆ. ಮೊಸಳೆಯ ರೇಖಾಚಿತ್ರ ಕಟ್ಟಿಗೆಯ ಹಡಗಿನ ಅರ್ಧಾ ಭಾಗದಂತಹ ಮತ್ತು ಎರಡು ಕಣ್ಣುಗಳ ಚಿತ್ರಗಳಿವೆ ಹಾಗೂ ಇಲ್ಲಿನ ಮನುಷ್ಯನ ಚಿತ್ರಗಳ ಬಗ್ಗೆ ಮೊಸಳಯ್ಯ ಗುಡ್ಡವು ನೋಡುಗರಿಗೆ ಬೆರಗನ್ನುಂಟುಮಾಡುತ್ತದೆ. ಆದ್ದರಿಂದ

ಮಾನವನ್ನು ಹಿಂದೆ ಗವಿಗಳಲ್ಲಿ ವಾಸಿಸುವಂತ ಹಾಗೂ ಪ್ರಾಣಿಗಳಾದ ರಕ್ಷಣೆಮಾಡಿಕೊಳ್ಳುವ ಸಲುವಾಗಿ ಇಂತಹ ಚಿತ್ರಗಳನ್ನು ಕೆತ್ತಿರುವಂತದನ್ನು ಹಂಪಿ ಪರಿಸರದಲ್ಲಿ ಕಾಣಬಹುದಾಗಿದೆ.

**ಕಲ್ಲಾಸಿರೆ – ಎರಡು:**

ಈ ಹಂತದ ಚಿತ್ರಗಳ ನೆಲೆಯು ವಿಜಯ ವಿಠಲದೇವಾಲಯದ ಆಗ್ನೇಯಕ್ಕೆ ಇರುವ ಮೊಸಳಯ್ಯನ ಗುಡ್ಡದಲ್ಲಿದೆ. ಗುಂಡಿನ ಆಸರೆಗಳಲ್ಲಿ ಬಿಡಿ ಚಿತ್ರಗಳಿವೆ ಇಲ್ಲಿನ ಗವಿಯಲ್ಲಿ ಪ್ರಾಣಿಚಿತ್ರಗಳು ಜನಸಾಮಾನ್ಯರಲ್ಲಿ ಪ್ರತಿಬಿಂಬಿಸುವಂತಹ ಚಿತ್ರಗಳು ವಿಜಯ ವಿಠಲ ದೇವಾಲಯ ಮಂಟಪದಲ್ಲಿ ಕಾಣುಬಹುದಾದು. ಆ ಚಿತ್ರಗಳು ಯಾವುವೆಂದರೆ:– ಗೂಳಿ. ಹುಲಿ ಮತ್ತು ಮನುಷ್ಯ, ಕಾಡುಕೋಣ ಚಿಗರೆ.

ಗೂಳಿಯ ಚಿತ್ರವು ಸಂಪೂರ್ಣ ರೇಖೆಗಳಿಂದ ರಚಿಸಲಾಗಿರುವುದು, ವಿಶೇಷ ಕೋಡುಗಳು ಆಕಾರದಲ್ಲಿದೆ. ಕತ್ತು ಮುಂಡ ಬಲಿಷ್ಟತೆಯನ್ನು ಸೂಚಿಸುತ್ತದೆ. ಮತ್ತೊಂದು ಪ್ರಾಣಿಯಲ್ಲಿ ಹಿಂದಿನ ಕಾಲುಗಳನ್ನು ಊರಿ ಮುಂದಿನ ಕಾಲುಗಳನ್ನು ಮೇಲಕೈತ್ತಿದಂತಿದೆ. ಹೀಗೆ ಹುಲಿಯ ಚಿತ್ರವು ಬಾಹ್ಯ ರೇಖಾಕೃತಿಯದಾಗಿದ್ದು, ದೇಹದ ಮೇಲೆ ಗೆರೆಗಳಿವೆ ಪಟ್ಟಿಗಳನ್ನು ಸೂಚಿಸಲಾಗಿದೆ ಬಾಲ ಅರೆವೃತ್ತಾಕಾರದಲ್ಲಿ ವೇದಿಕೆಹಾಕಿಕೊಂಡು ಮೇಲಕ್ಕೆತ್ತಿದೆ. ಹುಲಿಯ ಚಿತ್ರ ತುಂಬ ಸಹಜವಾಗಿದೆ. ಮತ್ತೊಂದು ಫಲಕದಲ್ಲಿ ನೃತ್ಯ ಮಾಡುವ ಹಾಗೂ ಓಡುವ ಭಂಗಿಯ ಪ್ರಾಣಿಗಳ ಚಿತ್ರಗಳನ್ನು ನೋಡಬಹುದಾಗಿದೆ.

**ಮೂರು:**

ಹೇಮಕೂಟದ ದೇವಾಲಯಗಳ ಪಶ್ಚಿಮಕ್ಕೆ ಅವರಣ ಹೊರಗೆ ಎರಡು ಕಡೆ ಮೀನುಗಳು, "ಮೀನುಗಳ ಬಾಹ್ಯ ರೇಖಾಚಿತ್ರಗಳಿವೆ. ಮೊದಲನೇ ಮೀನು ದೊಡ್ಡದಿದ್ದು, ಉದ್ದವಾಗಿದೆ. ದೇಹದ ೩ ಭಾಗದಲ್ಲಿ ಬಾಲದ ತುದಿ V ಆಕಾರದಲ್ಲಿದೆ. ದೇಹದಲ್ಲಿ ರೋಮನ್ ಅಕ್ಷರದಂತೆ ಅಲಂಕರಣವಿದೆ."[೪] ಇದೊಂದು ವಿಶೇಷ ಜಾತಿಯ ಮೀನಾಗಿರಬೇಕು. ಸಮೀಪದಲ್ಲಿ ಮತ್ತೊಂದು ಚಿಕ್ಕ ಮೀನಿನ ಚಿತ್ರವಿದೆ. ವಿಜಯನಗರ ಸಾಮ್ರಾಜ್ಯದಲ್ಲಿ ಹಲವಾರು ಸಮುದಾಯಗಳು ಇರುವ ಮಾಹಿತಿ ದೊರೆಯುತ್ತದೆ. ರಾಜನಿಗೆ ಜನಸಾಮಾನ್ಯರ ಸೇವೆಯು ಅಗತ್ಯವಾಗಿತ್ತು. ಆದ್ದರಿಂದ ಚಿತ್ರಗಾರ ಸಾಮಾಜಿಕ ಚಿತ್ರಣವನ್ನು ಚಿತ್ರಿಸಲಾಗಿದೆ.

**ನಾಲ್ಕು:**

"ಈ ಹಂತದಲ್ಲಿನ ಗವಿಯ ಚಿತ್ರವು ವಿರೂಪಾಕ್ಷ ದೇವಾಲಯದ ಹಿಂದೆ ಈ ಕಲ್ಲಾಸರೆ ಇದೆ. ಆರು ಮನುಷ್ಯನ ಚಿತ್ರಗಳು ಮತ್ತು ಸುಮಾರು ಹತ್ತು ಜಿಂಕೆ ಚಿತ್ರಗಳಿವೆ."[೫] ಮನುಷ್ಯ ಚಿತ್ರಗಳು ರೇಖಾ ಕೃತಿಯಲ್ಲವೂ ದ್ವಿತ್ರಿಕೋನ ಮುಂಡವನ್ನು ಹೊಂದಿದೆ. ಮೇಲಿನ ಎರಡು ಮನುಷ್ಯ ಚಿತ್ರಗಳು ಗೆರೆಯ ಮೂಲಕ ಜೋಡಿಸಲಾಗಿದೆ. ಪ್ರಾಯಶಃ ಸರಭೋಕ ಕ್ರಿಯೆಯನ್ನು ನಿರ್ದೇಶಿಸುತ್ತಿರಬೇಕು, ಈ ಎಲ್ಲಾ

ಮನುಷ್ಯರ ಚಿತ್ರಗಳು ಪೂರ್ಣ ವರ್ಣದಲ್ಲಿದ್ದರೆ, ಪ್ರಾಣಿಗಳ ಗುಂಪಿನ ನಡುವೆ ಇರುವ ಮನುಷ್ಯ ಚಿತ್ರದಲ್ಲಿ ತಲೆ ಬಾಹ್ಯ ರೇಖಾವೃತ್ತದಲ್ಲಿದೆ. ಕೈಯಲ್ಲಿ ಬೆರಳುಗಳನ್ನು ತೋರಿಸಲಾಗಿದೆ. ಸಾಮಾನ್ಯವಾಗಿ ದೊಡ್ಡ ಕೋಡುಗಳನ್ನು ಹೊಂದಿರುವ ಜಿಂಕೆಗಳು ಛಾಯಾರೂಪದಲ್ಲಿವೆ. ಇನ್ನೊಂದು ಗುಂಪು ನಾಯಿಯ ಚಿತ್ರಗಳನ್ನು ಒಳಗೊಂಡ ಆದಿಮಾನವ ವರ್ಣ ಚಿತ್ರಗಳಿವೆ. ಗುಂಪು ಬೇಟೆಯ ಪರಿಕಲ್ಪನೆಯನ್ನು ತೋರಿಸುತ್ತದೆ. ಈ ಚಿತ್ರಗಳು ವಿಜಯನಗರ ಕಾಲವಾಧಿಯಲ್ಲಿ ತನ್ನ ಆಹಾರಕ್ಕಾಗಿ ಪ್ರಶ್ನೆಗಳು ಹೇರಳವಾಗಿ ದೊರೆಯುವ ಸ್ಥಳಗಳನ್ನು ಗುರುತಿಸಿ ಅವುಗಳ ಚಿತ್ರಗಳಿಂದ ಮಾಹಿತಿಯನ್ನು ಪಡೆಯಲು ಸಹಕಾರಿಯಾಗಿದೆ.

**ಐದು:**

"ವಿರೂಪಾಕ್ಷ ದೇವಾಲಯದಿಂದ ಸುಮಾರು ೨.೧/೨ ಕೀಮೀ ದೂರದಲ್ಲಿ ಈ ಕಲ್ಲಾಸರೆ ಇದೆ. ಬರಮ ದೇವರ ಗುಂಡಿನಲ್ಲಿ ಈ ಚಿತ್ರಗಳಿವೆ. ಕಲ್ಲಾಸರೆಯಲ್ಲಿ ಸ್ವಲ್ಪವೇ ಹಿಂದೆ ಸರಿದ ಅರ್ಧ ಗೋಲಾಕೃತಿಯ ಚಿತ್ರಪಟದಂತಿದೆ. ಇದರ ಮೇಲೆ ಒಂದು ಕಡೆಯಿಂದ ಮತ್ತೊಂದು ಕಡೆಯವರೆಗೆ ಕುಣಿತದಲ್ಲಿ ತೊಡಗಿದ ನಾಲ್ಕು ಸ್ವಲ್ಪ ಮಾನವ ಮತ್ತು ಮನುಷ್ಯಾಕೃತಿಗಳಿವೆ."[೬] ಎಡಗಡೆಯಿಂದ ಮೊದಲನೆ ಮೂರು ಬಲದಿಂದ ನೋಟದಲ್ಲಿದೆ. ಕೊನೆಯದು ಮುಂಬದಿ ನೋಟದಲ್ಲಿದೆ. ಮೊದಲನೇ ಎರಡು ಚಿತ್ರಗಳಲ್ಲಿ ಸ್ಪಷ್ಟವಾಗಿ ಎಬ್ಬಿದ ಸ್ತನವೂ ಕಾಣಿಸುವುದರಿಂದ ಅವು ಸ್ತ್ರೀ ಆಕೃತಿಗಳು ಮೊದಲನೆಯುದು ಪುರುಷ ಸಣ್ಣಾ ಆಕೃತಿ ಬಹುಶಃ ಹುಡುಗನಿರಬೇಕು ತಲೆಯ ಭಾಗವು ಅಳಿಸಿ ಹೋಗಿರಬಹುದು. ಮನುಷ್ಯನ ಭಂಗಿ ನೃತ್ಯ ಚಿತ್ರಗಳು ಕಂಡು ಬರುತ್ತಾವೆ ಇಲ್ಲಿ ನೃತ್ಯಗಾರ್ತಿಗಳ ಮಾಹಿತಿ ದೊರೆಯುತ್ತದೆ ಜೊತೆಗೆ ಗರ್ಭಿಣಿಯ ಚಿತ್ರವು ಕಂಡು ಬರುತ್ತದೆ.

**ಆರು:**

ತುಂಗಭದ್ರಾ ನದಿಯ ತೀರದಲ್ಲಿ ಚಕ್ರತೀರ್ಥದ ಹತ್ತಿರ ಕಲ್ಲಾಸರೆ ಇದೆ. ಇಲ್ಲಿ ದೊಡ್ಡ ಪಕ್ಷಿ ಮತ್ತು ಮನುಷ್ಯನ ಚಿತ್ರಗಳಿವೆ. ಮನುಷ್ಯನು ಕೈಯಲ್ಲಿ ಆಯುಧವನ್ನು ಹಿಡಿದಿದ್ದಾನೆ ಪಕ್ಷಿ ಮತ್ತು ಮನುಷ್ಯನ ದೇಹದ ಮೇಲೆ ರೇಖೆಗಳ ಅಲಂಕರಣಗಳಿವೆ, ಇಲ್ಲಿಯೇ ಹಿಡಿಕೆಯುಳ್ಳ ಖಡ್ಗದ ಚಿತ್ರವಿದೆ.

**ಏಳು:**

ಬಾಲಕೃಷ್ಣ ದೇವಾಲಯದ ಎದುರಿಗೆ ಈ ಕಲ್ಲಾಸರೆ ಇದೆ ಕೆತ್ತಿದ ಕಡವೆಚಿತ್ರ, ಮತ್ತು ಮನುಷ್ಯನ ಚಿತ್ರಗಳಿವೆ. ಈ ಚಿತ್ರಗಳಲ್ಲಿ ಮಾನವ ಬೇಟೆಯನ್ನು ಹಾಡಲು ಬಳಸುವ ಆಯುಧ ಹಾಗೂ ಅವುಗಳ ಬಳಕೆಯನ್ನು ಗುರುತಿಸುವಂತಹ ಅಂಶವನ್ನು ಈ ಚಿತ್ರಗಳ ಮೂಲಕ ತಿಳಿಯಬಹುದು.

**ಕಮಲಾಪುರ:**

ಕನ್ನಡ ವಿಶ್ವವಿದ್ಯಾಲಯದ ಬಲಬದಿಯಲ್ಲಿರುವ ಒಂಟಿಕಲ್ಲು ಗುಂಡಿನಲ್ಲಿ ಒಂದು ಕೆಂಪುವರ್ಣದ ಕಡವೆಯ ಚಿತ್ರವಿದೆ. (೦.೨೮. ಕಿ. ಮೀ ೦.೩೫ ಮೀ) ಚಿತ್ರ ಬಾಹ್ಯರೇಖಾ ರೂಪದಲ್ಲಿದು, ಚಿಕ್ಕ

ಕೋಡು ದೊಡ್ಡ ದೇಹ ಎದೆ, ಮುಂದಿನ ಕಾಲುಗಳು ಮಾತ್ರ ಇದೆ. ಪುಷ್ಠಬಾಗ ಮತ್ತು ಹಿಂದಿನ ಕಾಲುಗಳು ಮಾಸಿವೆ.

**ವೆಂಕಟಾಪುರ:**

ವಾಲಿ ದಿಬ್ಬದ ಹತ್ತಿರ ಈ ಕಲ್ಲಾಸರೆ ಇದೆ. ಇಲ್ಲಿ ಮನುಷ್ಯ ಪ್ರಾಣಿಗಳ ಚಿತ್ರಗಳಿವೆ ಕೆಲವು ವಿಶಿಷ್ಟ ಚಿನ್ಹೆಗಳ ಕೆಂಪು ವರ್ಣದಲ್ಲಿವೆ. ಮನುಷ್ಯನ ಚಿತ್ರಗಳು ಕಡ್ಡಿಯಂತಹ ರೂಪದ ಕೈಗಳನ್ನು ಮೇಲಕೆತ್ತವ ಹುಲಿಯ ಚಿತ್ರ ಸಹಜವಾಗಿದೆ, ಕೆಲವು ಪ್ರಾಣಿಗಳು ಕುದುರೆಗಳಂತೆ ತೋರುತ್ತವೆ ಚಿಹ್ನೆಗಳಲ್ಲಿ ಹರಪ ನಾಗರಿಕತೆಯ ಲಿಪಿ ಮುದ್ರಿಕೆಗಳಲ್ಲಿ ಬಾರಿ ಬಾರಿಗಳ ಕಾಣಿಸಿಕೊಳ್ಳುವ ಎರಡು ಕಡೆಗಳೆಲ್ಲ ಒಂದೊಂದು ಬಾಹ್ಯ ಅಡ್ಡ ರೇಖೆಯುಳ್ಳ ರೋಮನ್ ಲಿಪಿಯ 'ಯು' ಮತ್ತು ಅಶೋಕನ ಕಾಲದ ಬ್ರಾಹ್ಮಿ ಲಿಪಿಯ 'ವ' ಅಕ್ಷರವನ್ನು ಹೋಲುವ ಚಿಹ್ನಯ ಮೂರು, ನಾಲ್ಕು ಎಡೆಗಳಿವೆ, ಈ ಎಲ್ಲಾ ಚಿಹ್ನೆಗಳು ಚೆಲ್ಲಪಿಲ್ಲಿಯಾಗಿವೆ.

ಇಲ್ಲಿ ಮನುಷ್ಯರ ಮತ್ತು ಪ್ರಾಣಿಗಳ ಚಿತ್ರಗಳಿವೆ. ಕೈ ಕೈ ಹಿಡಿದು ನೃತ್ಯ ನಿರಂತರವಾದ ಮನುಷ್ಯನ ಚಿತ್ರಗಳ ಎರಡು ಸಾಲು ಇಲ್ಲಿದೆ. ಮೇಲಿನದ್ದು ಛಾಯಾರೂಪದ್ದು, ಕೆಳಗಿನದ್ದು ಬಾಹ್ಯ ರೇಖಾ ರೂಪದ್ದು, ಮೇಲಿನ ಮನುಷ್ಯ ಚಿತ್ರಗಳು ತ್ರಿಕೋನಾಕಾರದವು. ದ್ವಿತಿಯ ತ್ರಿಕೋನ ರೀತಿಯ ಮುಂಡವನ್ನು ಹೊಂದಿದವು, ಮೇಲಿನ ಚಿತ್ರದ ತಲೆಯ ಸುತ್ತ ಗೆರೆಗಳಿದ್ದು ಕೂದಲನ್ನು ನಿರ್ದೇಶಿಸುತ್ತವೆ.

**ನಾಗೇನಹಳ್ಳಿ:**

ಹೊಸಪೇಟೆಯಿಂದ ಹಂಪಿ ರಸ್ತೆಯಲ್ಲಿ ಬರುವ ಅನಂತಶಯನ ಗುಡಿ ಗ್ರಾಮದಿಂದ ಉತ್ತರಕ್ಕೆ ಸುಮಾರು ೪ ಕಿ. ಮೀ ದೂರದಲ್ಲಿ ನಾಗೇನಹಳ್ಳಿ ಗ್ರಾಮವಿದೆ. ಗ್ರಾಮದಿಂದ ಉತ್ತರಕ್ಕೆ "೧ ಕಿ.ಮೀ ದೂರದಲ್ಲಿ ಧರ್ಮಗುಡ್ಡವಿದ್ದು, ಗುಡ್ಡದಲ್ಲಿರುವ ದೇವಾಲಯದ ಹಿಂಭಾಗದಲ್ಲಿ ಕಲ್ಲಾಸರೆ ಚಿತ್ರ ಇದೆ. ಸುಮಾರು ಅದರ ಉತ್ತರ ಭಾಗದಲ್ಲಿ ಕೆಂಪು ಬಣ್ಣದ ಚಿತ್ರಗಳಿವೆ. ಇಲ್ಲಿ ಹಿಂದಿನ ಮತ್ತು ನಂತರ ಕಾಲದ ಚಿತ್ರಗಳಿವೆ."[೭] ಕೆಳಭಾಗದಲ್ಲಿ ೩ ಎತ್ತಿನ ಸಣ್ಣ ಛಾಯಾರೂಪದ ಚಿತ್ರಗಳಿವೆ. ಶೈಲಿಯಿಂದ ಅವು ಶಿಲಾಯುಗದ ಚಿತ್ರಗಳೆಂದು ಹೇಳಬಹುದು. ಉಳಿದಂತೆ ಗೂಳಿಯ ರೇಖಾ ಕಡ್ಡಿ ಚಿತ್ರಗಳಿವೆ. ಇದು ಆದಿಮಾನವ ಕಾಲ ಚಿತ್ರ ಎಂಬುದನ್ನು ಸೂಚಿಸುತ್ತದೆ. ಕಲ್ಲಾಸರೆಯಿಂದ ಬಲಕ್ಕೆ ಸುಮಾರು ೫ ಫೀಟ್ ಅಂತರದಲ್ಲಿ ನೂತನ ಶಿಲಾಯುಗದ ಎರಡು ಆಯುಧಗಳು ದೊರೆತಿವೆ.

ಬುಕ್ಕಸಾಗರದ ಕರಿಸಿದ್ದೇಶ್ವರ ಮಠದ ಬದಿಯ (ಪೂರ್ವಭಾಗ) ಬೆಟ್ಟದಲ್ಲಿ ಒಂದು ಸ್ವತಂತ್ರ ಗುಂಡು ಇದ್ದು ಅದರ ಎತ್ತರ ಬದಿಯ ಕಲ್ಲಾಸರೆಯಲ್ಲಿ ಕೆಂಪು ವರ್ಣದಿಂದ ಚಿತ್ರಿಸಿದ ಗೂಳಿಯ ಚಿತ್ರವಿದೆ. ಮುಂಡ ದಷ್ಟ ಪುಷ್ಟವಾಗಿದ್ದು ಕೋಡುಗಳು ಬಲಿಷ್ಠವಾಗಿವೆ.

**ಇಂದರ್ಗಿ:**

ಇದು ತಾಲೂಕು ಕೇಂದ್ರವಾದ ಗಂಗಾವತಿಯಿಂದ ೨೭ ಕಿ.ಮೀ ದೂರದಲ್ಲಿದ್ದು ಶಿಲಾ ತಾಮ್ರಯುಗ ಸಂಸ್ಕೃತಿಗೆ ಸೇರಿದ ಆದಿಮಾನವನ ನೆಲೆಯಾಗಿದೆ. ಇಲ್ಲಿ ಆ ಕಾಲದ ಮಡಿಕೆ ಚೂರು ಮತ್ತು ಗವಿವರ್ಣ ಚಿತ್ರಗಳನ್ನು ಸಹ ನೋಡಬಹುದಾಗಿದೆ. ಒಂದು ಬೂದಿ ದಿಬ್ಬವನ್ನು ಇಲ್ಲಿಯೇ ಬೆಳಕಿಗೆ ತರಲಾಗಿದೆ. ಇದರಿಂದ ಇದು ಆದಿಮಾನವನ ವಾಸಸ್ಥಾನ ಮತ್ತು ಪ್ರಾಗೈತಿಹಾಸಿಕ ನೆಲೆಯೆಂದು ಗುರುತಿಸಬಹುದಾಗಿದೆ.

**ನಂದಿಹಳ್ಳಿ:**

ಇದು ತಾಲೂಕು ಕೇಂದ್ರವಾದ ಗಂಗಾವತಿಯಿಂದ ೧೨ ಕಿ.ಮೀ ದೂರದಲ್ಲಿದ್ದು ನವಶಿಲಾಯುಗ, ಶಿಲಾ, ತಾಮ್ರಯುಗದ ಸಂಸ್ಕೃತಿಗೆ ಸೇರಿದ ಮಾನವ ನೆಲೆಯಾಗಿದೆ. ಈ ಪ್ರದೇಶದಲ್ಲಿನ ಆದಿಮಾನವನ ಮತ್ತು ಪ್ರಾಗೈತಿಹಾಸಿಕ ಸಂಸ್ಕೃತಿಯ ಕುರಿತು ಅಧ್ಯಯನ ಮಾಡಲು ಸಹಾಯಕವಾಗಿದ.

**ಮಲ್ಲಾಪುರ:**

ಇದು ತಾಲೂಕು ಕೇಂದ್ರವಾದ ಗಂಗಾವತಿಯಿಂದ ೧೨ ಕಿ.ಮೀ ದೂರದಲ್ಲಿದ್ದು, ನವಶಿಲಾಯುಗ, ಶಿಲಾಯುಗದ ಹಾಗೂ ಬೃಹತ್ ಶಿಲಾಯುಗದ ಸಂಸ್ಕೃತಿಗೆ ಸೇರಿದ ಮಹತ್ವದ ಆದಿಮಾನವ ನೆಲೆಯಾಗಿದೆ. "ಇಲ್ಲಿ ಸೂಕ್ಷ್ಮ ಶಿಲಾಯುಗ ಸಂಸ್ಕೃತಿಯ ಕಾಲದ ಗವಿ ವರ್ಣ ಚಿತ್ರಗಳು ದೊರೆತಿವೆ. ಅವು ಕಂದು ಬಣ್ಣವನ್ನು ಹೊಂದಿದ ಜಿಂಕೆ, ಹೋರಿ, ಹಾಗೂ ಇತರೆ ಚಿತ್ರಗಳು ಕಂಡುಬಂದಿವೆ."[೮] ಇಲ್ಲಿ ಶಿಲಾ ಪರಿಕರಣಗಳನ್ನು ಕ್ವಾರ್ಟ್ಸ್ ಶಿಲೆಯಲ್ಲಿ ರೂಪಿಸಿದ್ದು ಅವುಗಳಲ್ಲಿ ಹೆರಚ್ಚಕೆ ಮತ್ತು ಅರ್ಧಚಂದ್ರಾ ಕೃತಿಯ ಉಪಕರಣಗಳು ಮುಖ್ಯವಾಗಿ ದೊರೆತಿವೆ. ಇಲ್ಲಿ ನೂತನ ಶಿಲಾಯುಗದ ಕೈಕೊಡಲಿ ಮಡಕೆ ಚೂರು ಮತ್ತು ಶಿಲಾ ತಾಮ್ರಯುಗ ಸಂಸ್ಕೃತಿ ವರ್ಣ ಚಿತ್ರಗಳನ್ನು ಗುರುತಿಸಲಾಗಿದೆ. ಇಲ್ಲಿ ವಿಶೇಷ ಆಕರ್ಷಕ ರೀತಿಯ ಎತ್ತುಗಳು, ಇತರೆ ವನ್ಯ ಮೃಗಗಳ ಚಿತ್ರಗಳನ್ನು ಬಿಡಿಸಲಾಗಿದೆ. ಇವುಗಳಲ್ಲಿ ಕೆಲವು ಕಂದು ಕೆಂಪು ಬಣ್ಣಗಳಲ್ಲಿ ಚಿತ್ರಿಸಲ್ಪಟ್ಟಿದ್ದರೆ ಇನ್ನುಳಿದವುಗಳನ್ನು ಬಿಳಿಬಣ್ಣಗಳಿಂದ ಚಿತ್ರಿಸಲಾಗಿದೆ.

## ೩.೨. ಬಯಲು ಬಂಡೆ ಚಿತ್ರಗಳು

"ಹಂಪಿ ಪ್ರದೇಶದ ಸುತ್ತಮುತ್ತಲಿನಲ್ಲಿ ಕಾಣುವ ಬಯಲು ಬಂಡೆಯ ಚಿತ್ರಗಳು ಭಿನ್ನವಾಗಿ ಕಾಣುತ್ತಾರೆ. ದೊಡ್ಡ ದೊಡ್ಡ ಬಂಡೆಗಳ ರಾಶಿಯಂತಿರುವ ಬೆಟ್ಟಗಳ ಮಧ್ಯದ ಬಂಡೆಗಳಲ್ಲಿ ಕೊರೆದ ಬಂಡೆ, ಸೀಳಿದ ಬಂಡೆ, ಗವಿಯಬಂಡೆ, ಬೃಹತ್ತಾದಬಂಡೆ, ಆದಿಮ ನೆಲೆಯಾದ ಬಂಡೆ ಆದಿಮಾನವನ ಚಿತ್ರದ ಚಿತ್ರಕಲೆಯ ಬಂಡೆಗಳು ಸಾಮಾಜಿಕ ಅಲೆ ಭಿನ್ನವಾಗಿ ಕಾಣಲು ತೊಡಗಿದವು."[೯] ಹಾಗೆ ಗುಹೆಯಲ್ಲಿನ ತಳದಲ್ಲಿಯ ಬಂಡೆಗಳಲ್ಲಿ ಅಲ್ಲಿ ಇಂತಹ ಚಿತ್ರಗಳು ಕಂಡುಬರುತ್ತವೆ. ಸಾಮಾನ್ಯ

ಮೇಲ್ಮೈಯ ಮೇಲೆ ಬೇಕಾದ ಚಿತ್ರವನ್ನು ಮೂಡಿಸುವುದಕ್ಕೆ ಅನೂಕೂಲಕರವಾದ ಮೊಂಡು ತುದಿಯುಳ್ಳ ಉದ್ದನೆ ಕಲ್ಲು ತುಂಡಿನಿಂದ ಏಕಪ್ರಕಾರವಾಗಿ ಕುಟ್ಟಿಕುಟ್ಟಿ ಚಿತ್ರಗಳನ್ನು ಕೆತ್ತಿರುವುದು. ಹೀಗೆ ಕೊರೆದ ಚಿತ್ರಗಳು ಸ್ವಲ್ಪ ಆಳವಾಗಿರುತ್ತವೆ.

**ಸುಡಾವೆ ಮಣ್ಣಿನ ಗೊಂಬೆಗಳು:**

ಯಾವುದೇ ಯಾಂತ್ರಿಕ ಸಾಧನವನ್ನು ಉಪಯೋಗಿಸದೆ ಮಣ್ಣಿನ ಮುದ್ದೆಯನ್ನು ಕೈಗಳಿಂದಲೇ ರೂಪಿಸಿ ತೀಡಿ ತಿದ್ದಿ ಗೊಂಬೆಗಳನ್ನು ಮಾಡಲಾಗಿರುತ್ತದೆ. ಸಾಮಾನ್ಯವಾಗಿ ಈ ದನ, ಕುರಿ, ಪಕ್ಷಿ ಮತ್ತು ಮನುಷ್ಯರ ಇವುಗಳ ಪ್ರತಿಕೃತಿಗಳಾಗಿವೆ. ಈ ಮಣ್ಣಿನಿಂದ ಕಾಲುಗಳನ್ನು, ಕೋಡುಗಳನ್ನು, ಪ್ರತ್ಯೇಕ ಮಾಡಿ ಶರೀರಕ್ಕೆ ಜೋಡಿಸಲಾಗಿರುತ್ತದೆ. ಚಿಕ್ಕ ಗೊಂಬೆಗಳಲ್ಲಿ ಅಖಂಡವಾಗಿರುತ್ತದೆ. "ಇವುಗಳಿಗೆ ಸರಿಹೋಗುವ ಲೇಪನವನ್ನು ಬಳಿದು ನಂತರ ಅಡವೆ ಅವಿಗೆಯಲ್ಲಿ ಸುಟ್ಟಿರುತ್ತಾರೆ."[೧೦] ಇವು ಗಟ್ಟಿ ಗೊಂಬೆಗಳಾಗಿದ್ದು ಮೈಮಾಟವು ಆಕರ್ಷಕವಾಗಿರುತ್ತದೆ. ಆದರೆ ಬಾಯಿ ಕಣ್ಣು, ಕಿವಿ ಮೊದಲಾದ ಮುಖ್ಯ ಲಕ್ಷಣಗಳು ಅಷ್ಟೇನೂ ಸ್ಪಷ್ಟವಾಗಿರುವುದಿಲ್ಲ. ಆದ್ದರೂ ಈ ಚಿತ್ರಗಳ ಆಧಾರದ ಮೇಲೆ ಮಾನವ ನಿರ್ಮಾಮಿತವಾದ ವ್ಯವಸ್ಥೆ ಈ ಸುದಾವೆ ಮಣ್ಣಿನ ಗೊಂಬೆಗಳ ಚಿತ್ರಗಳ ಮೂಲಕ ಸಾಮಾಜಿಕ ಜೀವನ ವ್ಯವಸ್ಥೆಯನ್ನು ಗಮನಿಸಬಹುದು.

**ಮಡಕೆ (ಮೃತ್ಪಾತ್ರ) ಚಿತ್ರಗಳು:**

ಮಡಿಕೆಯಿಂದ ಮಾಡಿದ ವರ್ಣಚಿತ್ರಗಳು ಸಾಮಾನ್ಯವಾಗಿ ರೇಖಾಚಿತ್ರಗಳಾಗಿರುತ್ತವೆ. ಮಡಕೆಗಳ ಅಲಂಕಾರಕೋಸ್ಕರ ಬಿಡಸಲಾಗಿರುತ್ತದೆ. ಅಪರೂಪವಾಗಿ ಪ್ರಾಣಿ–ಪಕ್ಷಿಗಳ ಚಿತ್ರಗಳು ಇರುತ್ತವೆ. ಮಣ್ಣಿನ ಪಾತ್ರೆಗಳನ್ನು ಬಿಸಿಲಿನಲ್ಲಿ ಚೆನ್ನಾಗಿ ಒಣಗಿಸಿ ಮೇಲೆ ಬಟ್ಟಿಯಲ್ಲಿ ಸುಡುವುದಕ್ಕೆ ಮುಂಚೆಯೇ ಅವುಗಳ ಮೇಲೆ ಚಿತ್ರಗಳನ್ನು ಬಿಡಿಸಲಾಗಿರುತ್ತದೆ. ಹೀಗೆ ಆನೇಕ ರೀತಿಯ ಸಾಮಾಜದಲ್ಲಿ ಪ್ರತಿ ಬಿಂಬಿಸುವಂತಹ ವಸ್ತುಚಿತ್ರಗಳು ಪ್ರಾಣಿ, ಪಕ್ಷಿ, ಬಂಡೆಯ ಚಿತ್ರ ಗವಿವರ್ಣದ ಚಿತ್ರಗಳು ಹಂಪಿಯ ಪರಿಸರದ ಸಾಮಾಜಿಕ ಚಿತ್ರಗಳಾಗಿವೆ.

**ನಾಗೇನಹಳ್ಳಿ**

ಇಲ್ಲಿಯ ಧರ್ಮರ ಗುಡ್ಡದಲ್ಲಿ ವರ್ಣಚಿತ್ರಗಳು, ಕುಳಿ ಅಕೃತಿಗಳು ಮತ್ತು ಒಂದು ಕೆತ್ತಿ ಮಾಡಿದ ದೊಡ್ಡ ಕುಳಿ, ಇದೇ ಚಿತ್ರಿತ ಕಲ್ಲಾಸರೆಯ ಪಶ್ಚಿಮಕ್ಕಿರುವ ಕಲ್ಲಾಸರೆಯಲ್ಲಿ ನೆಲಬಂಡೆಯ ಮೇಲೆ ೩ ಸ್ಥಳದಲ್ಲಿ ಕುಳಿ, ಆಕೃತಿಗಳಿವೆ ಅವು ಹಿರೇಬೆಣ ಕಲ್ಲಿನ ಕುಳಿ ಆಕೃತಿಗಳಂತೆ ಇವು ಬೆಟ್ಟದ ದಕ್ಷಿಣದ ಇಳಿಜಾರಿನ ಒಂದು ಬಂಡೆಯ ಮೇಲೆ ಒಂದು ವೃತ್ತಾಕಾರದ ದೊಡ್ಡ ಕುಳಿ ಇದೆ ಇದು ಸುಮಾರು ೧೦ ಸೆ.ಮೀ ವ್ಯಾಸದ ಅಳತೆಯನ್ನು ೧ಸೆ.ಮೀ ಆಳವನ್ನು ಹೊಂದಿದ, ಹಾಗೆ ಬಂಡೆಯ ಮೇಲಿನ ಚಿತ್ರಗಳನ್ನು ಕೊರೆದು ಆಕಾರ ರೂಪಿಸಲಾಗಿದೆ.

"ಒಂದನೆಯದು ಎತ್ತಿನ ಚಿತ್ರವಿದ್ದು, ಬಾಯಿ ಮುಖ ತ್ರಿಕೋನಾಕಾರದಲ್ಲಿದ್ದು ಕೋಡುಗಳನ್ನು ಸರಳ ರೇಖೆಯಲ್ಲಿ ತೋರಿಸಲಾಗಿದೆ. ಗುದದ್ವಾರ ಬಾಲವಿದ್ದು, ಶಿಶ್ನವನ್ನು ಬಿಡಿಸಲಾಗಿದೆ. ಎರಡನೇ ಚಿತ್ರದಲ್ಲಿ ಬಂಡೆಯಲ್ಲಿ ಮೂರು ಪ್ರಾಣಿ ಚಿತ್ರಗಳಿವೆ."[೧೧] ಪರಸ್ಪರ ಎದುರಾಗಿ ನಿಂತಿರುವ ಎರಡು ಎತ್ತುಗಳು ಮತ್ತು ಒಂದು ಏಕ ರೇಖೆಯ ದನದ ಚಿತ್ರವಿದೆ, ಈ ಪ್ರಾಣಿಗಳಿಗೆ ಗುದದ್ವಾರ ಇಲ್ಲದಿರುವುದರಿಂದ ಜಿಂಕೆಯಂತೆ ತೋರುತ್ತವೆ. ಮೂರನೇ ಚಿತ್ರವು ಅಶ್ವ ಸವಾರನ ಚಿತ್ರ ಕುದುರೆಯ ಮೇಲೆ ಕುಳಿತಿದ್ದಾನೆ. ಅವನ ಕೈಕುದುರೆಯ ಲಗಾಮನ್ನು ಹಿಡಿದಂತೆ ತೋರುತ್ತಿದೆ. ಚಿತ್ರದಲ್ಲಿ ಸ್ಪಷ್ಟತೆ ಇಲ್ಲ, ನಾಲ್ಕನೆಯದು ಬಲಿಷ್ಠ ಗೂಳಿಯ ಚಿತ್ರವಾಗಿದೆ. ಕೋಡುಗಳು ನೇರವಾಗಿದೆ. ಕಣ್ಣನ್ನು ಸಣ್ಣವೃತ್ತದಲ್ಲಿ ಸ್ಪಷ್ಟವಾಗಿ ಬಿಡಿಸಲಾಗಿದೆ. ಗುದದ್ವಾರ ದೊಡ್ಡದಿದ್ದು ಬಾಲ, ಕಾಲುಗಳು ಸಹಜವಾಗಿದೆ. ಐದನೆಯ ಚಿತ್ರಗಳು ದೊಡ್ಡ ದೊಡ್ಡ ಬಂಡೆ ಮೇಲೆ ಇವೆ. ಸಮಕಾಲಿನ ನಾಗರಿಕ ಎತ್ತಿನ ಚಿತ್ರಗಳಿವೆ. ಆದರೆ ಪ್ರಾಚೀನವಾಗಿ ಒಂದು ದನ ಮತ್ತು ವೃತ್ತದ ಚಿತ್ರಗಳು ಮಹತ್ವದ್ದಾಗಿವೆ. ಎತ್ತಿನ ಚಿತ್ರದಲ್ಲಿ ಅರ್ಧ ದೇಹ ಕಾಲುಗಳನ್ನು ಸೂಚಿಸುವ ರೇಖೆಗಳು ಅಂಕು ಡೊಂಕಿಲ್ಲದೇ ಆಂತರಿಕ ಸ್ಪಷ್ಟವಾಗಿದೆ. ಮುಖಭಾಗ ನಾಶವಾಗಿದೆ. ಕೋಡುಗಳು ರೋಮನ್ ಲಿಪಿ ಆಕಾರದಲ್ಲಿ ಇವೆ. ಎತ್ತಿನ ಮೇಲ್ಭಾಗದಲ್ಲಿ ಒಂದರ ಒಳಗೆ ಒಂದಿರುವ ಎರಡು ವೃತ್ತಗಳ ಚಿತ್ರ ಗಮನಸೆಳೆಯುತ್ತದೆ. ವೃತ್ತದ ಮಧ್ಯಭಾಗದಲ್ಲಿ ಚಿಕ್ಕ ಕುಳಿ ಇದೆ. ಇದೇ ಕರೆಕಲ್ ಗುಡ್ಡದ ಮೇಲೆ ಬದಿಯ ಕಪ್ಪುಕಲ್ಲಿನ ಆನೇಕ ಬಂಡೆಗಳ ಮೇಲೆ ಕುಟ್ಟಿದ ಮತ್ತು ಕೊರೆದ ಚಿತ್ರಗಳಿವೆ.

**ಬಂಡೆ–೧**

"ಕಪ್ಪುಕಲ್ಲಿನ ಶ್ರೇಣಿಯ ಕಲ್ಲಿನಲ್ಲಿ ಎತ್ತಿನ ಚಿತ್ರವಿದೆ. ಮೂತಿ ಚೂಪಾಗಿದ್ದು v ಆಕಾರದಲ್ಲಿ ಕೋಡುಗಳಿವೆ. ಗುದದ್ವಾರ ಮತ್ತು ಬಾಲವಿದೆ."[೧೨] ಇವನೆಲ್ಲ ಗಮನಿಸಿದರೆ ಕಲ್ಲಿನಲ್ಲಿ ಕೆತ್ತನೆ ಮಾಡಿದ ಎತ್ತಿನ ಚಿತ್ರವು ವಿಶಿಷ್ಟವಾಗಿ ವಿವಿಧ ರೂಪದಲ್ಲಿ ಹಂಪಿಯಲ್ಲಿ ಈ ಚಿತ್ರವು ಕಾಣಲಾಗಿದೆ.

**ಬಂಡೆ–೨**

ಇಲ್ಲಿ ಎತ್ತಿನ ಚಿತ್ರ ಭಿನ್ನವಾಗಿದೆ. ಕಾಲು ಮತ್ತು ಮುಂಡವನ್ನು ೨ ರೇಖೆಗಳಲ್ಲಿ ತೋರಿಸಲಾಗಿದೆ. ಮುಖ ಗುದದ್ವಾರ ಕೋಡು ಪ್ರತೇಕವಾಗಿ ಕಾಣುವುದು, ದಷ್ಠ ಪುಷ್ಟವಾಗಿ ಎತ್ತಿವಿನ ಚಿತ್ರಗಳ ರೇಖಾ ವಿನ್ಯಾಸದ ನೆಲೆಯಲ್ಲಿ ಅದ್ಬುತವಾಗಿ ಕಂಡುಕೊಳ್ಳಲಾಗಿದೆ.

**ಬಂಡೆ–೩**

ಎತ್ತಿನ ಸವಾರನ ಚಿತ್ರವಿದೆ. ಸವಾರನು ಮೇಲೆ ನಿಂತಿದ್ದು ಕೈಯಲ್ಲಿ ಕೋಲನ್ನೊ, ಖಡ್ಗವನ್ನೋ ಹಿಡಿದಿದ್ದಾನೆ. ಎತ್ತಿನ ರಚನೆಯು ವಿಶೇಷವಾಗಿದೆ. ಇದೇ ಕಲ್ಲಿನಲ್ಲಿ ಇನ್ನೊಂದು ಮಗ್ಗುಲಲ್ಲಿ ಎತ್ತಿನ ಚಿತ್ರವಿದೆ. ಇಲ್ಲಿ ಎತ್ತಿವಿನ ಆಕಾರದ ವಿನ್ಯಾಸವು ಈ ಪ್ರಾಣಿಯು ಪಶುಪಾಲಕರವರ ಜೀವನ ರೂಪಿಸಿಕೊಳ್ಳವುದು ಒಂದು ಮಾದರಿಯಾಗಿದೆ.

**ಬಂಡೆ ೪**

ಇದರಲ್ಲಿ ಒಂದರ ಒಳಗೆ ಒಂದರಂತೆ ಕೊರೆದ ೩ ವೃತ್ತಗಳ ಚಿತ್ರವಿದೆ. ಮೊದಲನೆಯ ನೆಲೆಯಲ್ಲಿದ್ದಂತೆ ವೃತ್ತದ, ಮಧ್ಯದಲ್ಲಿ ಚಿಕ್ಕ ಕುಳಿ ಕೊರೆಯಲಾಗಿದೆ. ತ್ರಿಕೋನ ಆಕಾರದ ಚಿಕ್ಕ ಕುಳಿಯ ಬಂಡೆಯ ಮೇಲೆ ಕೊರೆದ ಚಿತ್ರವು ವಿಜಯನಗರದ ನೆಲೆಯಲ್ಲಿ ಪ್ರಬಲತೆಯನ್ನು ಹೊಂದಿದ ಪ್ರಾಣಿಯಾಗಿದೆ.

**ಬಂಡೆ ೫**

ಇದರ ಹತ್ತಿರದಲ್ಲಿ ಎತ್ತಿನ ಸವಾರನ ಚಿತ್ರವಿದೆ. ದನದ ಮೇಲೆ ವ್ಯಕ್ತಿಯೊಬ್ಬ ಕುಳಿತಿದ್ದು ಮುಂದಿನ ಕೈಯಿಂದ ದನದ ಭಾಗವನ್ನು ಹಿಡಿದಂತಿವೆ. ದನವು ಮನುಷ್ಯನಿಗೆ ಜೀವನಾರ್ಥಕ ಆಶ್ರಯದ ಒಂದು ಪ್ರಾಣಿಯಾಗಿದೆ.

**ಬಂಡೆ ೬**

ಇಲ್ಲಿ ಎತ್ತಿನ ಚಿತ್ರವಿದೆ ಮುಖ ಕೋಡು, ಗುದದ್ವಾರ, ಬಾಲ, ದೇಹ, ಕಾಲುಗಳು ಸ್ಪಷ್ಟವಿದ್ದು, ಚಿತ್ರ ಶೈಲಿಯಿಂದ ಸೊಗಸಾಗಿದೆ. ಈ ಮೇಲಿನ ಚಿತ್ರವನ್ನು ನೋಡಿದಾಗ ಪ್ರತಿಯೊಂದರ ಭಾಗಗಳಾ ವಿಶಿಷ್ಠವಾಗಿ ಕಾಣುವುದು.

**ಬಂಡೆ ೭**

ಈ ಹಂತದಲ್ಲಿ ಎರಡು ಎತ್ತುಗಳು ಪರಸ್ಪರ ಎದುರಾಗಿ ನಿಂತಿವೆ. ಎಡಗಡೆಯ ಎತ್ತಿನ ಚಿತ್ರ ಕೇವಲ ಏಕ ರೇಖೆಯದಾಗಿ ಬಲಗಡೆಯ ಚಿತ್ರದಲ್ಲಿ ಗುದದ್ವಾರ ಇಲ್ಲದಿರುವುದರಿಂದ ಬೇರೆ ಪ್ರಾಣಿಯ ರೀತಿ ಕಾಣುತ್ತವೆ. ಈ ವಿತ್ತುಗಳು ಮಾನವನಿಗೆ ಆಶ್ರತವಾದ ಧಾರ್ಮಿಕತೆಯಾದ ಕೃಷಿಕರವಾದ ಪಶುಪಾಲನೆಗೆ ಬಳಕಲ್ಲಿ ಅವಶ್ಯಕವಾದ ಪ್ರಾಣಿಯಾಗಿದೆ.

**ಬಂಡೆ ೮**

"ಇದೊಂದು ದೊಡ್ಡ ಬಂಡೆಯ ಮೇಲಿನ ಚಿತ್ರವು ತ್ರಿಶೂಲ ಹಿಡಿದು ನಿಂತಿರುವ ವ್ಯಕ್ತಿ, ನಾಲ್ಕು ಎತ್ತು ಮತ್ತು ಅಶ್ವ ಸವಾರನ ಕಟ್ಟಿದ ರೇಖೆಗಳ ಚಿತ್ರಗಳಿವೆ. ತ್ರಿಶೂಲ ಹಿಡಿದ ವ್ಯಕ್ತಿಯ ಚಿತ್ರತುಂಬಾ ಎತ್ತರವಾದ ಉದ್ದವಾದ ಭಯಾನಕವಾಗಿದೆ."[೧೩] ಧಾರ್ಮಿಕ ತಯಿರಿದ ಈ ವಿತ್ತಿವಿನಿಂದ ಮನುಷ್ಯನಿಗೆ ಅವಶ್ಯಕವಾದ ಪ್ರಾಣಿಯಾಗಿದೆ. ಈ ಮೇಲಿನ ಮಾಹಿತಿಯಿಂದ ತಿಳಿದುಬರುವುದೇನೆಂದರೆ ಎತ್ತಿನ ಚಿತ್ರ, ಸೈನಿಕ ಚಿತ್ರ, ಗುಂಡಿರ ಚಿತ್ರ, ಸವಾರ ರೈತನ ಚಿತ್ರ, ಕುದುರೆಯ ಚಿತ್ರಗಳ ವಿವರಣೆ ಬರುತ್ತದೆ. ವಿಜಯನಗರ ಕಾಲದಲ್ಲಿ ಸೈನಿಕ ವ್ಯವಸ್ಥೆ (ಅಶ್ವ, ಕಾಲದಳ) ಹೋರಾಟದ ಚಿತ್ರಗಳನ್ನು ಕಾಣಲಾಗುತ್ತದೆ.

**ಸೀಳು ಬಂಡೆ ಆಸರೆ:**

ಸಾಮಾನ್ಯವಾಗಿ ಸೀಳು ಬಂಡೆ ಕಲ್ಲಾಸರೆಗಳು ಅಧಿಕವಾಗಿದೆ. ಬೃಹತ್ ಅಥವಾ ಮಧ್ಯಮ ಗಾತ್ರದ ಬಂಡೆಗಳಲ್ಲಿ ಮೂಲೆಯಲ್ಲೊಂದು, ಬಿದಿಯಲ್ಲೊಂದು ಒಂದು ಭಾಗ ಬಿಳಿ ತುಂಡು ಬಂಡೆಯ ಮೇಲಿನ ಚಿತ್ರವನ್ನು ಬಿಡಿಸಲಾಗಿದೆ.

೧. "ಚಿಕ್ಕ ಬೆಸಕಲ್ಲ್ ೨. ಆಗೋಲಿ ೩. ನಾಗೇನಹಳ್ಳಿ ೪. ಹೊಸ ಬಂಡಿ ಹರ್ಲಾಪುರಗಳಲ್ಲಿ ಮೂಲೆ ಕಲ್ಲಾಸರೆಗಳು ಸಹ ಚಿತ್ರಗಳನ್ನು ನೋಡಬಹುದಾಗಿದೆ. (ಗಡಿ) ಹಿರೇಬೆನಕಲ್ಲ್ ೧. ಹಂಪಿ ೨. ಕಮಲಾಪುರ ಹೀಗೆ ಮೂಲೆ ಆಸರೆಗಳಿಗಿಂತ ಬದಿಯ ಆಸರೆಗಳು ಚಿತ್ರ, ರಚನೆಗೆ ಪ್ರಶಸ್ತವಾಗಿದೆ."[೧೪] ಮತ್ತು ಆನೆಗುಂದಿಯ ಆನೆ ನೆಲೆಯಲ್ಲಿ ೩ ಸ್ವತಂತ್ರ ಗುಂಡಿಗಳಿವೆ. ಇಲ್ಲಿನ ಚಿತ್ರಣವು ಅನೇಕ ಸ್ಥಳಗಳಲ್ಲಿ ವಿಶಿಷ್ಟವಾದ, ದೃಡವಾದ ಹಂಪೆಯ ಸುತ್ತಮುತ್ತಲಿನಲ್ಲಿ ಕಂಡು ಬರುವ ವಿಶಿಷ್ಟತೆಯಾಗಿ ವಿಜಯನಗರದ ಸಾಮ್ರಾಜ್ಯದಲ್ಲಿ ಕಂಡುಬಂದ ಸಂಗತಿಯಾಗಿವೆ.

ಅವುಗಳ ಮೂಲೆ ಭಾಗದಲ್ಲಿ ಖಡ್ಗದ ಸಣ್ಣ ಕಲ್ಲಾಸರೆಗಳಿದ್ದು ಇದರಲ್ಲಿ ಅಪಾರ ಚಿತ್ರಗಳ ಪ್ರತಿರೂಪ ಬಣ್ಣಗಳ ನೆಲೆಗಳು ನಿಸರ್ಗದ ವರ್ಣಗಳ ವಿನ್ಯಾಸವು ಬಂಡೆಗಳ ಮೂಲೆ ಹಂಪಿ ಪರಿಸರದಲ್ಲಿನ ರೇಖಾ ಚಿತ್ರಗಳು ನೋಡಬಹುದಾಗಿದೆ.

**ವಾರೆ ಬಂಡೆ ಆಸರೆ:**

"ವಾರೆ ಬಂಡೆ ಅಸಾ ಚಿತ್ರದ ವಿನ್ಯಾಸದ ರೇಖೆಗಳು ಚಿತ್ರ ಎರಡು ಬಂಡೆಗಳು ಪರಸ್ಪರ ಒಂದಕ್ಕೊಂದು ವಾರೆಯಾಗಿ ನಿಂತು ಜೋಪಡಿ ಆಕಾರದಲ್ಲಿ ಚಿತ್ರಗಳಿರುತ್ತವೆ"[೧೫] ಅಥವಾ ಒಂದು ಎತ್ತರವಾದ ಗುಂಡದ ಮೇಲೆ ಬೃಹತ್ ಬಂಡೆಯೊಂದು ವಾಗಿಯಾಗಿ ಮಲಗಿದಂತಿರುತ್ತದೆ. ವಾರ ಬಂಡೆಯ ಆಸರೆಯಲ್ಲಿ ಚಿತ್ರ, ಬೃಹತ್ತಾದ ಆಸರೆಗಳು ಕಾಲಕ್ರಮೇಣ ತುದಿಯಲ್ಲಿ ಸೀಳುಗಳುಂಚಾಗಿ ಮಳೆಯ ನೀರು ಇಲ್ಲದಿರುವುದರಿಂದ ಕೆಲವೊಂದರ ಚಿತ್ರಗಳು ಚಿಕ್ಕಬೆನಕಲ್ಲಿನ ಕಲ್ಲಾಸರೆಯಲ್ಲಿ ಕೈಗೆ ನಿಲುಕದಷ್ಟು ಎತ್ತರದ ಬಂಡೆಯ ಕೊರೆದ ಚಿತ್ರಗಳನ್ನು ಗಮನಿಸಿದಾಗ ಆನೇಕ ಕಾಲನುಕ್ರಮದಲ್ಲಿ ಸನ್ನಿವೇಶಗಳನ್ನು ಜನಸಾಮಾನ್ಯರಲ್ಲಿ ಮೂಡುವಂತಹ ವಿಷಯಗಳ ಚಿತ್ರಣಗಳಾಗಿವೆ.

**ಬಯಲು ಬಂಡೆ ಚಿತ್ರಗಳು:**

"ಬಯಲು ಬಂಡೆ ಚಿತ್ರಗಳ ಮುಖ್ಯವಾಗಿ ಪಶುಪಾಲಕರ ರಚನೆಗಳೆಂದು ಹೇಳಬಹುದು, ಅವು ಪಶುಪಾಲನೆಯ ಸಂದರ್ಭದಲ್ಲಿ ರಚಿತವಾಗಿರುವ ಸಾಧ್ಯತೆಯನ್ನು ಚಿತ್ರನೆಲೆಗಳ ಹಿನ್ನೆಲೆಯಲ್ಲಿ ತರ್ಕಿಸಬಹುದಾದ ಚಿತ್ರ ಸಂಗತಿಯಾಗಿದೆ."[೧೬] ನೆಲೆಗಳಲ್ಲಿ ರಚಿತವಾಗಿರುವುದನ್ನು ಗುರುತಿಸಬಹುದು, ಅವುಗಳೆಂದರೆ, ಮೊದಲನೆಯ ನೆಲೆ ನೀರು ಸಂಗ್ರಹಣೆಯ ಕೆರೆಗಳ (ನೈಸರ್ಗಿಕ) ಬದಿಯ ಬಂಡೆಗಳಲ್ಲಿ ಇರುವುದು, ಉದಾಹರಣೆ ಕಮಲಾಪುರದ (ವಿದ್ಯಾರಣ್ಯದ) ಅಥವಾ (ವಿದ್ಯಾರಣ್ಯ)

ಮತ್ತು ಬಸಾಪಟ್ಟಣ, ಕುರುಗೋಡು ವಿಶೇಷವೆಂದರೆ ಈ ಎರಡು ನೆಲೆಗಳ ಒಂದೇ ಬಗೆಯಾಗಿರುವುದು (ಎತ್ತರ ಭುಜದ ಎತ್ತುಗಳು ಮಟ್ಟ ಆಶ್ವ ಸವಾರ ಚಿತ್ರಗಳಾಗಿವೆ. ಒಂದನೆಯ ನೆಲೆ (ಬಸಾಪಟ್ಟಣ) ಗಂಗಾವತಿ ಕೊಪ್ಪಳ ರಸ್ತೆಯಲ್ಲಿರುವ ತುಂಗಭದ್ರ ಎಡದಂಡೆ ಕಾಲುವೆಯ ಬದಿಯ ಅನ್ಸಾರಿ ಫಾರಂನ, ಹಿಂದಿನ ಕೆರೆಯಲ್ಲಿ ಈ ನೆಲೆಯನ್ನು ಇಲ್ಲಿ ಬಿಡಿಸಿದ ಬಿಡಿ ಗುಂಡುಗಳ ಮೇಲೆ ಕೊರೆದ ಚಿತ್ರಗಳು ನಿಂತಿವೆ.

**ಬಯಲು ಬಂಡೆಗಳ ಮೇಲೆ ಬಿಡಿಸಿದ ರೇಖಾ ಚಿತ್ರಗಳು:**

ಹಂಪಿಯ ಪರಿಸರದಲ್ಲಿ ಬಯಲು ಬಂಡೆ ಚಿತ್ರಗಳು ವಿವಿಧ ನೆಲೆಗಳಲ್ಲಿ ರಚಿತವಾಗಿರುವುದನ್ನು ಗುರುತಿಸಬಹುದು. ಉದಾಹರಣೆ ಕಮಲಾಪುರ (ವಿದ್ಯಾರಣ್ಯ) ಮತ್ತು ಬಸಾಪಟ್ಟಣ ಹರ್ಲಾಪುರ, "ಹಂಪಿ ಅಂಜನಾದ್ರಿ, ಋಷ್ಯ ಮುಖ ಪರ್ವತ ಕಡೆಬಾಗಿಲು, ಕುರುಗೋಡು, ಅಷ್ಟೇನಹಳ್ಳಿ, ತೆಕ್ಕಲಕೋಟೆ, ಗೇಡೆ ಕೋಟೆ, ಸಂಗನಕಲ್ಲು ಮೊದಲಾದ ಪ್ರತೇಕವಾಗಿ ಬಂಡೆಗಳ ಮೇಲೆ ಎತ್ತು ಮನುಷ್ಯರ ಹಾಗೂ ಪ್ರಾಣಿಗಳ ಚಿತ್ರಗಳು ರಚನೆಯಾಗಿವೆ."[೧೭] ಕಪ್ಪ, ಕಣ ಶಿಲೆಗಳ ಬಂಡೆಗಳ ಮೇಲೆ, ಇಲ್ಲಿನ ಚಿತ್ರಗಳನ್ನು ಗಮನಿಸಿದಾಗ ಚಿತ್ರರಚನೆಯು ಬಹಳ ಅದ್ಭುತವಾದ ಚಿತ್ರಗಳನ್ನು ಕೊರೆಯಲು ಹಂಪಿ ಪರಿಸರದ ಅನೇಕ ಪೌರಾಣಿಕ ಸಂಬಂಧಿಸಿದಂತೆ ಅಲ್ಲಿನ ಬಂಡೆಯ ಚಿತ್ರಗಳು ಆದಿ ಮಾನವನ ಕೆತ್ತನೆಗಳ ರೇಖಾ ಚಿತ್ರಗಳು ಅದ್ಬುತವಾಗಿ ಕಾಣಬಹುದು.

**೩.೩. ಭಿತ್ತಿ ಚಿತ್ರಕಲೆ**

ಭಾರತದಲ್ಲಿ ಚಿತ್ರಕಲೆ ಚರಿತ್ರೆಯ ಬೆಳವಣಿಗೆಯನ್ನು ಗುರುತಿಸಿದರೆ ಅವುಗಳಲ್ಲಿನ ವಿವಿಧ ಹಂತಗಳು ನಮಗೆ ಸ್ಪಷ್ಟವಾಗಿ ಗೋಚರಿಸುತ್ತದೆ. "ಪ್ರಾಚೀನ ಮಾನವನ ಗುಹಾಂತರ ಚಿತ್ರಗಳಿಂದ ಹಿಡಿದು, ಅಜಂತ, ಬೌದ್ಧ ಧರ್ಮದ ಚಿತ್ರಗಳು ಬಾದಾಮಿ ಎಲ್ಲೋರಾದ ವೈದಿಕ ಸಾಂಪ್ರದಾಯಿಕವಾದ ಭಿತ್ತಿ ಚಿತ್ರಗಳು ತಂಜಾವೂರುಗಳಲ್ಲಿ ಕಂಡುಬರುತ್ತದೆ."[೧೮] ಸಿಂತಾನ ವಾಸಲ್ ಮುಂತಾದ ಪ್ರದೇಶಗಳ ಭೀತಿಚಿತ್ರಗಳಲ್ಲಿ ಮೊಗಲ್, ರಾಜಸ್ಥಾನ, ಪಹಾಡಿ, ಚಿಕಾಣಿ ಚಿತ್ರಗಳು ಮತ್ತು ಜೈನ, ತಾಳೆಗರಿ ಹಸ್ತಪ್ರತಿಗಳಲ್ಲಿನ ಚಿತ್ರಗಳು ಹಾಗೂ ಮುಖ್ಯವಾಗಿ ಭಿತ್ತಿ ಚಿತ್ರಗಳು ವಿಜಯನಗರ ಕಾಲದ ಹಂಪಿ, ಲೇಪಾಕ್ಷಿ ಮತ್ತು ತಾಡಪತ್ರಿಗಳಲ್ಲಿನ ಭಿತ್ತಿಚಿತ್ರಗಳೆಲ್ಲವೂ ರೇಖಾಪ್ರದಾನವಾದ ಚಿತ್ರಗಳಲ್ಲಿ ಭಿತ್ತಚಿತ್ರಗಳಿರುತ್ತಿದು ಅತ್ಯಂತ ಮುಖ್ಯ ಪಾತ್ರವಹಿಸಿದೆ. ಯಾವುದೇ ಒಂದು ಆಕೃತಿಯ ರಚನೆ ಆಗಬೇಕಾದರೆ, ರೇಖೆಗಳು ಅದನ್ನು ನಿರ್ಧರಿಸಬೇಕು. ರೇಖೆಗಳು ವಿವಿಧ ರೂಪಗಳೊಡನೆ, ಭಾವ, ಭಂಗಿಗಳೊಡನೆ, ಲಾಲಿತ್ಯದಿಂದ ಕೂಡಿವೆ ರೇಖೆಗಳಲ್ಲಿನ ಸತ್ಯ ಮತ್ತು ಜೀವಂತಿಕೆ, ಆ ಕೃತಿಗಳನ್ನು ಆಕರ್ಷಕವಾಗುತ್ತದೆ. ಅಲ್ಲದೇ ಅವುಗಳಲ್ಲಿ ಅಗಾಧವಾದ ಚಾಲನೆಯನ್ನು ತುಂಬುತ್ತವೆ. ಈ ಮೇಲೆ ಹೆಸರಿಸಿದ ಉದಾಹರಣೆಗಳಲ್ಲಿ ಆಕೃತಿಗಳ ಬಾಹ್ಯರೇಖೆಗಳಾಗಿ ಅವುಗಳಲ್ಲಿನ ವಿವಿಧ ಅಳತೆಗಳನ್ನು ತೋರಿಸುವ ಸಾಧನೆಗಳಾಗಿ ರೇಖೆಗಳೇ ಆಕೃತಿಗಳ ನಿರ್ದಿಷ್ಟ ರೂಪರೇಖೆಯನ್ನು ನಿರ್ದೇಶಿಸುತ್ತದೆ.

ಭಿತ್ತಿ ಚಿತ್ರಕಲೆ ಎಂದರೆ ಗೋಡೆಗಳ ಮೇಲೆ ಚಿತ್ರ ರಚನೆ ಮಾಡುವುದೇ ಆಗಿದೆ. ಕರ್ನಾಟಕದಲ್ಲಿ ಪಾಚೀನ ಕಾಲದಿಂದಲೂ ಈ ಕಲೆ ರೂಢಿಯಲ್ಲಿದೆ. "ಕ್ರಿ.ಶ ೭ನೇ ಶತಮಾನದಲ್ಲಿ ಬಾದಾಮಿ ಚಾಲುಕ್ಯರ ಚಕ್ರವರ್ತಿ ಮಂಗಳೇಶನು ಬಾದಾಮಿ ೩ನೇ ಗುಹೆಯ ಮೇಲ್ಚಾವಣಿಗೆ ವರ್ಣಚಿತ್ರಗಳಿಂದ ಅಲಂಕರಿಸಿರುವುದು ಕಂಡುಬರುತ್ತದೆ."[೧೯] ಇದು ಕರ್ನಾಟಕದ ಭಿತ್ತಿಚಿತ್ರ ಸಂಪ್ರದಾಯದ ಪ್ರಾಚೀನ ನಿದರ್ಶನವೆನ್ನಬಹುದು. ಹೀಗೆ ಕರ್ನಾಟಕದ ಭಿತ್ತಿ ಚಿತ್ರಕಲೆ ದೀರ್ಘಕಾಲದಿಂದ ಶಾಸನಗಳಲ್ಲಿ ಹಾಗೂ ಪ್ರಾಚೀನ ಕನ್ನಡ ಕಾವ್ಯಗಳಲ್ಲಿ ಉಲ್ಲೇಖವಾಗಿದೆ.

ಪ್ರತ್ಯೇಕ ಚಿತ್ರಕಲೆ ಹಾಗೂ ನಾಟ್ಯಕಲೆಗಳಲಿ ಪ್ರಸ್ತಾಪವು ಕಲ್ಯಾಣಿ ಚಾಲುಕ್ಯ ಚಕ್ರವರ್ತಿ ೩ನೇ ಸೋಮೇಶ್ವರನು ರಚಿಸಿದ ಮಾನಸೋಲ್ಲಾಸದಲ್ಲಿದೆ. ಮುಂದೆ ಹೊಯ್ಸಳರ ಕಾಲಾವಧಿಯಲ್ಲಿಯೂ ಮೊದಲನೇ ಬಲ್ಲಾಳನ ಹೆಗ್ಗಡೆ ಕಾಳಿಮಯ್ಯನ ಹಾಸನದ ಬಳಿಯ ಜಕ್ಕನಹಳ್ಳಿಯಲ್ಲಿರುವ ಕಾಳೇಶ್ವರ ದೇವಾಲಯದ ಮಾಶಿಗ ಗೋಡೆ ಮತ್ತು ಕಂಬಗಳನ್ನು ವರ್ಣ ಚಿತ್ರಗಳಿಂದ ಅಲಂಕರಿಸಿದನು. ಈ ದೇವಾಲಯವನ್ನು ೧೧೭೦ರಲ್ಲಿ ನಿರ್ಮಿಸಲಾಗಿತ್ತು. ಇದಲ್ಲದೆ ಶ್ರವಣಬೆಳಗೊಳದ ಒಂದು ಬಸದಿಯು ಭಿತ್ತಿಚಿತ್ರಗಳಿಂದ ಅಲಂಕೃತವಾದ ಬಗ್ಗೆ ಉಲ್ಲೇಖಿಸಲಾಗಿದೆ.

ವಿಜಯನಗರದ ಅರಸರ ಕಾಲಾವಧಿಯಲ್ಲಿ ಭಿತ್ತಿಚಿತ್ರ ಕಲೆಗೆ ವಿಶೇಷ ಪ್ರೋತ್ಸಾಹ ದೊರೆಯಿತು. ಇದರ ಫಲವಾಗಿ ಚಿತ್ರಕಲೆಯಲ್ಲಿ ಒಂದು ಹೊಸ ಶೈಲಿ ದಕ್ಷಿಣ ಭಾರತದಲ್ಲಿ ಹುಟ್ಟಿತು. ವಿಜಯನಗರ ಶೈಲಿಯಲ್ಲಿ ರಚಿತವಾದ ಚಿತ್ರಗಳನ್ನು ದಕ್ಷಿಣ ಭಾರತ ತಾಡಪತ್ರಿ, ಲೇಪಾಕ್ಷಿ, ತಿರುಪತಿ, ಕಾಂಚಿಪುರ, ಶ್ರೀರಂಗ ಮುಂತಾದ ಪ್ರದೇಶಗಳಲ್ಲಿ ಕಾಣಬಹುದು. ಇದಕ್ಕೆ ವಿಜಯನಗರ ಅರಸರ ಕಾಲದ ವಿರುಪಾಕ್ಷ ದೇವಾಲಯ ಭಿತ್ತಿ ಚಿತ್ರಕಲೆಗೆ ಒಳ್ಳೆಯ ಉದಾಹರಣೆಯಾಗಿದೆ.

ಹಂಪಿ ವಿರುಪಾಕ್ಷ ದೇವಾಲಯದ ಮಹಾರಂಗಮಂಟಪದ ಒಳಮಾಳಿಗೆಯಲ್ಲಿರುವ ಚಿತ್ರಗಳು ಆ ಕಾಲದ ಅತ್ಯಂತ ಪ್ರಮುಖವಾದ ಉದಾಹರಣೆಗಳಾಗಿವೆ. ವಿಜಯನಗರ ಕಾಲದಲ್ಲಿ ಅಂದರೆ ಕ್ರಿ.ಶ ೧೬ ನೇ ಶತಮಾನದ ಮೊದಲೆರಡು ದಶಕಗಳಲ್ಲಿ ಚಿತ್ರಕಲಾ ಇತಿಹಾಸದ ದೃಷ್ಟಿಯಿಂದ ಈ ಚಿತ್ರಗಳು ವಿಜಯನಗರದ ಕಾಲದಲ್ಲಿ ರಚಿತವಾದ ಅಪೂರ್ವ ಇತಿಹಾಸದ ದಾಖಲೆಗಳಾಗಿವೆ. ಪ್ರಸ್ತುತ ಪ್ರಭಂದದಲ್ಲಿ ಇವುಗಳಿಗೆ ಸಂಬಂಧಿಸಿದಂತೆ ಹಲವಾರು ವಿಷಯಗಳನ್ನು ಅಭ್ಯಾಸ ಮಾಡಲಾಗಿದೆ. ಇವುಗಳಲ್ಲಿ ರಚಿತವಾಗಿರುವ ಹಲವಾರು ವಿಷಯದ ಚಿತ್ರದ ವಸ್ತುಗಳನ್ನು ವಿಭಿನ್ನವಾದ ನಿಲುವುಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ಈ ಚಿತ್ರಗಳ ಬಗ್ಗೆ ಇದುವರೆಗೂ ಆಗಿರುವ ಅಧ್ಯಯನ ಅಪೂರ್ಣವೆನ್ನಿಸುತ್ತದೆ. ಮಹಾ ರಂಗಮಂಟಪದಲ್ಲಿ ಚಿತ್ರಗಳ ಬೆಳವಣಿಗೆ ಹೊಂದಿರಬಹುದಾದ ರೀತಿ ಚಿತ್ರಗಳಲ್ಲಿ ಶೈಲಿ ಇನ್ನು ಶಿವನನ್ನು ಅವನ ರಥ ಹಾಗೂ ಬಿಲ್ಲುಬಾಣಗಳನ್ನು ಕಥೆಯಲ್ಲಿ ಬರುವ ನಿರೂಪಣೆಗೆ ತಕ್ಕಂತೆ ನೈಜ ಚಿತ್ರವನ್ನು ಚಿತ್ರಿಸಿದ್ದಾನೆ. ಇಲ್ಲಿ ಭೂಮಿಯ ರಥ, ಬ್ರಹ್ಮನೇ ಸಾರಥಿ ಸೂರ್ಯ ಚಂದ್ರರೆ ಅಥವಾ ಗಾಲಿಗಳ ಇಂದ್ರ ಪರುಣ ಕುಬೇರರೇ ರಥಾಶ್ವಗಳು ಆದರೆ ಇಲ್ಲಿ ಕಲಾವಿದ ಐದು ಕುದುರೆಗಳನ್ನು ಮಾತ್ರ ಚಿತ್ರಿಸಿದ್ದಾನೆ.

ಶಿವನ ಕೈಯಲ್ಲಿರುವ ತ್ರಿಶೂಲ, ಮಂದಾರ ಪರ್ವತ, ವಾಸುಕಿಯೇ ಬಿಲ್ಲಿನದಾರ, ಅಗ್ನಿ, ವಿಷ್ಣು, ವಾಯು ಇವರು ಬಾಣಗಳಾಗಿದ್ದಾರೆ ಇದರಿಂದಲೇ ಶಿವನ ತ್ರೀಪುರಾಸುರರನು ಧ್ವಂಸಮಾಡುವ ಕೆಲಸ ಅತ್ಯಂತ ಸುಗಮವಾಗುತ್ತದೆ. ಮನ್ಮಥನ ಆಕೃತಿಗಳಲ್ಲಿ ನಿಂತಿರುವ ಭಂಗಿಯನ್ನು ಗಮನಿಸಿದರೆ ಎರಡೂ ಒಂದೇ ತೆರನಾಗಿ ಇರುವುದನ್ನು ಗಮನಿಸಬಹುದಾದ ವಿಚಾರವಾಗಿರುತ್ತದೆ.

ಮನ್ಮಥ ವಿಜಯ ಮತ್ತು ತ್ರಿಪುರ ಸಂಹಾರದ ಚಿತ್ರಸಂಯೋಜನೆಗಳ ಕೆಳಗಿನ ಪಟ್ಟಿಕೆಯಲ್ಲಿ ದಶಾವತಾರದ ಆಕೃತಿಯಾದ ಈ ಆಕೃತಿಗಳ ಕೊನೆಯ ಭಾಗದಲ್ಲಿ ಕಾಮ ರತಿಯರನ್ನು ಬೇರೆ ಬೇರೆಯಾಗಿ ಒಂದೊಂದು ಚೌಕದಲ್ಲಿ ಚಿತ್ರಿಸಲಾಗಿದೆ. ಭಿತ್ತಿಚಿತ್ರದ ವಿಶೇಷವೆಂದರೆ ಅಂದರೆ ಕಾಮ, ರತಿ ಈ ಎರಡು ವಾಹನಗಳು ಮಾನವನಾ ಆಕೃತಿಗಳಿಂದ ಚಿತ್ರಿತವಾಗಿವೆ. ಅಂದರೆ ಮಾನವಕೃತಿಗಳೇ ಗಜದ ಮತ್ತು ಅಶ್ವದ ರೂಪದಲ್ಲಿ ಚಿತ್ರಿಸಲಾಗಿದೆ. ದಶಾವತಾರದ ಚಿತ್ರಗಳಲ್ಲಿ ವಿಷ್ಣುವಿನ ಮತ್ತು ಅವತಾರದ ಚಿತ್ರಗಳು ವೈವಿಧ್ಯಮಯವಾಗಿ ಮತ್ತು ನೈಜವಾಗಿ ಮೂಡಿಬಂದಿದೆ.

"ಹಂಪಿಯ ವರ್ಣಚಿತ್ರಗಳಲ್ಲಿ ಎದ್ದು ಕಾಣುವ ಲಕ್ಷಣಗಳೆಂದರೆ ಆಕೃತಿಗಳನ್ನು ಸಾಮಾನ್ಯವಾಗಿ ಪಾರ್ಶ್ವಮುಖ, ಛಾಯೆಯಲ್ಲಿ ಚಿತ್ರಿಸಿದ್ದಾರೆ. ಬ್ರಹ್ಮನನ್ನು ಚಿತ್ರಿಸುವಾಗ ಅವನ ನಾಲ್ಕು ಮುಖಗಳನ್ನು ಬಿಡಿಸಿದ್ದಾರೆ."[೨೦] ಈ ವರ್ಣಚಿತ್ರಗಳಲ್ಲಿ ಎದ್ದು ಕಾಣುವ ವರ್ಣಗಳೆಂದರೆ ಹಸಿರು, ಬೂದು ಬಣ್ಣ ಮತ್ತು ಟೊಯೆಡೊ ಕೆಂಪು ಪ್ರಾಣಿಗಳ ಕಣ್ಣುಗಳನ್ನು ಮನುಷ್ಯರ ಕಣ್ಣಿನಂತೆಯೇ ಚಿತ್ರಿಸಲಾಗಿದೆ. ಪ್ರತಿಯೊಂದು ದೃಶ್ಯವನ್ನು ಚೌಕಗಳಲ್ಲಿ ಚಿತ್ರಿಸಲಾಗಿದೆ. ಕರ್ನಾಟಕದಲ್ಲಿ ಸ್ವಲ್ಪ ಉತ್ತಮ ರೀತಿಯಲ್ಲಿ ಉಳಿದು ಕೊಂಡಿರುವ ಅತೀ ಹಳೆಯ ಭಿತ್ತಿ ಚಿತ್ರಗಳೆಂದರೆ ವಿರೂಪಾಕ್ಷ ದೇವಾಲಯ ಎನ್ನಬಹುದು. ಇಲ್ಲಿ ಚಿತ್ರಗಳಾಗಿರುವ ಶಿವ, ಕಲ್ಯಾಣ ಸುಂದರ, ಕಾಮದಹನ, ಮೂರ್ತಿ ಮತ್ತು ತ್ರಿಪುರಾಂತರ ಜೊತೆಗೆ ವಿಷ್ಣುವಿನ ದಶಾವತಾರಗಳು ಅಷ್ಟದಿಕ್ಪಾಲಕರು ಅರ್ಜುನನು ಪ್ರತಿಬಿಂಬವನ್ನು ನೋಡಿ ಮೀನಿ ಗುರಿ ಇಟ್ಟು ಬಾಣ ಬಿಡುತ್ತಿರುವುದು.

ಮೆರವಣಿಗೆಯಲ್ಲಿ ಒಬ್ಬ ಮುನಿಯನ್ನು ಒಯ್ಯುತ್ತಿರುವುದು ಗಿರಿಜಾಕಲ್ಯಾಣ ತ್ರಿಪುರಾಸುರ, ಸಂಹಾರ, ದಕ್ಷ ಯಜ್ಞ, ಮನ್ಮಥ ವಿಜಯ, ದ್ರೌಪದಿ ಸ್ವಯಂವರ, ಗೋಪಿಕಾ, ವಸ್ತ್ರಾಪಹರಣ ಪ್ರಸಂಗಗಳು ಇಲ್ಲಿ ಮಂಟಪ ಛಾವಣಿಯಲ್ಲಿ ಚಿತ್ರಲಂಕೃತವಾಗಿವೆ. ಛಾವನೆಯನ್ನು ಅಂಶಗಳಿಗೆ ವಿಂಗಡಿಸಲಾಗಿದೆ ಇದೊಂದು ಅಂಕಣದಲ್ಲಿಯೂ, ರಾಮಾಯಣ, ಮಹಾಭರತ, ಭಗವಂತಗಳಿಂದ ಆಯ್ದು ಕಥಾ ಸಂದರ್ಭಗಳ ಚಿತ್ರಿತವಾಗುವ, ಇವುಗಳಲ್ಲಿ ಸ್ವಾರಸ್ಯವಾದ ಒಂದು ಚಿತ್ರ ವಿದ್ಯಾರಣ್ಯದ ಮೆರವಣಿಗೆ ಈ ರಾಜರುಗಳನ್ನು ಪಲ್ಲಕ್ಕಿಯಲ್ಲಿ ಕೂರಿಸಿ ಕರೆದೊಯ್ಯುತ್ತಿರುವ. ಈ ಚಿತ್ರವು ವಿಜಯನಗರದ ಭಿತ್ತಿ ಚಿತ್ರ ಇತಿಹಾಸ ದೃಷ್ಟಿಯಿಂದ ಮಹತ್ವವಾದುದು.

**ವಿಜಯ ವಿಠಲ ದೇವಾಲಯ:**

ಕೃಷ್ಣದೇವರಾಯನ ಕಾಲವಧಿಯಲ್ಲಿ ನಿರ್ಮಿಸಲಾಗಿರುವ ವಿಜಯ ವಿಠಲ ದೇವಾಲಯವು ಭಿತ್ತಿಚಿತ್ರಗಳಿಂದ ಅಲಂಕಾರಿಕವಾಗಿ ಎಂಬುದನ್ನು ಸೂಕ್ಷ್ಮವಾಗಿ ಗಮನಿಸಬಹುದು ವಿಜಯನಗರದ ಅರಸರು ಇದರ ಮಂಟಪವನ್ನು ಸಂಗೀತ ನೃತ್ಯ ಉತ್ಸವಗಳಿಗಾಗಿ ಬಳಸುತ್ತಿದ್ದು. ಈ ಮಂಟಪದ ಚಾವಣಿಯ ವರ್ಣಚಿತ್ರಗಳಿಂದ ಕೂಡಿದ್ದಕ್ಕೆ ಇಂದಿಗೂ ಛಾವಣಿಯಲ್ಲಿ ಬಣ್ಣದ ಛಾಯೆ ಉಳಿಕೆಗಳು ಅಲ್ಲಲ್ಲಿ ಕಂಡು ಬರುತ್ತವೆ. ಕೆಂಪು, ನೀಲಿ, ಹಸಿರು, ಹೆಣ್ಣುಗೆಂಪು ಬಣ್ಣದ ಗುರುತುಗಳು ಗೋಚರಿಸುವುದರಿಂದ ಈ ಮಂಟಪವು ಭಿತ್ತಿ ಚಿತ್ರಗಳಿಂದ ಅಲಂಕೃತವಾಗಿತ್ತು ಆದರೆ ಕಾಲಾನುಕ್ರಮೇಣವಾಗಿ ಎಲ್ಲವೂ ನಾಶವಾಗಿವೆ. ವಿಜಯವಿಠಲ ದೇವಾಲಯದ ಮುಂದೆ ಇರುವ ಕಲ್ಲಿನ ರಥವನ್ನು ಚಿತ್ರಗಳಿಂದ ಅಲಂಕರಿಸಲಾಗಿತ್ತು ಈ ರಥಕ್ಕೆ ಅಳವಡಿಸಿರುವ ಕಲ್ಲಿನ ಚಕ್ರಗಳು ತಿರುಗುತ್ತಿದ್ದವು ಆದರೆ ವಾತವರಣಕ್ಕೆ ಸಿಕ್ಕಿ ಇದರಲ್ಲಿದ್ದ ವರ್ಣಚಿತ್ರಗಳು ಸಂಪೂರ್ಣವಾಗಿ ನಾಶವಾಗಿದೆ. ಈ ರಥದ ಮಂಟಪದ ಹಾಗಿರುವ ಕಮಾನುಗಳಲ್ಲಿ ಉದ್ದವಾದ ಪಕೆಗಳಲ್ಲಿ ಅಲ್ಲಲ್ಲಿ ಹಸಿರು ಕೆಂಪು, ನೀಲಿ ಛಾಯೆ ವರ್ಣದ ಗುರುತುಗಳನ್ನು ಪಸರಿಸಿ ನೋಡಬಹುದು.

"ಆನೆಗೊಂದಿಯು ಒಂದು ಐತಿಹಾಸಿಕ ಮಹತ್ವ ಪಡೆದ ಸ್ಥಳವಾಗಿದೆ. ಆನೆಗೊಂದಿಯ, ಮಠದಲ್ಲಿ ಹಳೆಕಾಲದ ಭಿತ್ತಿ ಚಿತ್ರಗಳು ಸಾಕಷ್ಟು ಕಂಡುಬರುತ್ತವೆ. ಹುಚ್ಚಪ್ಪಯ್ಯನ; ಮಠವೆಂದು ಕರೆಯಲಾಗುವ ಹಳೆಯ ಕಟ್ಟಡವು ಇದು ಒಂದು ಗದ್ದೆಯಲ್ಲಿದೆ. ಈ ಗದ್ದೆಯು ಮುಸ್ಲಿಂ ಒಡೆತನಕ್ಕೆ ಸೇರಿದ. ಹುಚ್ಚಪ್ಪಯ್ಯನ ಮಠದ ಉತ್ತರ ಭಾಗದಲ್ಲಿ ಹಲವು ಕಂಬಗಳಿಂದ ಕೂಡಿದ ಹರಾಜಾಗುವಂತಹ ಮಂಟಪ ವಿದೆ. ಈ ಮಂಟಪದ ಮೇಲ್ಛಾವಣಿಗಳಲ್ಲಿ ಚಿತ್ರಗಳಿವೆ, ಇವು ವಿಜಯನಗರ ಕಾಲದಲ್ಲಿಯು ರಚಿಸಲಾಗಿದೆ ಎಂದು ಊಹಿಸಲಾಗಿದೆ. ಇವುಗಳ ಶೈಲಿಯನ್ನು ನೋಡಿದರೆ ಸ್ಪಷ್ಟವಾಗಿ ತಿಳಿಯುತ್ತದೆ, ಈ ಚಿತ್ರಗಳಲ್ಲಿ ನವನಾರಿ ಕುಂಜರದ ಸೊಂಡಲಿನ ಭಾಗದ ಇಬ್ಬರು ಸ್ತ್ರೀಯರ ಅಸ್ಪಷ್ಟ ರೂಪಗಳು, ಚಾಮರ ಬೀಸುತ್ತಿರುವ ಪರಿಚಾರಿಕೆ, ಕಮಲದ, ಹೂವಿನ ತೂಗುಬಿಟ್ಟ ಹಾರಗಳು, ಪಂಚನಾರಿ, ತುಂಗದ ತಲೆಯ ಭಾಗದಲ್ಲಿ ಒಬ್ಬಳು ಸ್ತ್ರೀ ಹೀಗೆ ಕೆಲವೇ ಮುಸುಕು ಚಿತ್ರಗಳು ಉಳಿದುಕೊಂಡಿವೆ, ಇಷ್ಟರಿಂದಲೇ ಅವು ರೇಖೆ ಎಂದು ಗುರುತಿಸಬಹುದಾಗಿದೆ."[೨೧]

ಒಂದು ಅಂಕಣದಲ್ಲಿ ಹೂ ಗೊಂಚಲು ಅದರಲ್ಲಿ ಒಡಾಡುತ್ತಿರುವ ಅಳಿಲುಗಳನ್ನು ಚಿತ್ರಿಸಲಾಗಿದೆ. ಅಲ್ಲೇ ಇಬ್ಬರು ಸ್ತ್ರೀಯರು ಮತ್ತು ಚಿಕ್ಕ ಆಕೃತಿಗಳು ನೃತ್ಯ ಮಾಡುತ್ತಿರುವಂತೆ ಇದೆ. ಅಲ್ಲೇ ಇಬ್ಬರು ಪುರುಷರು ನಿಂತು ನೋಡುತ್ತಿದ್ದು ಮೇಲ್ಭಾಗಗಳನ್ನು ದೊಡ್ಡದಾದ ಕಮಲಾಕೃತಿ ಇದೆ. ಇನ್ನೊಂದು ಅಂಕಣದಲ್ಲಿ ಇಬ್ಬರು ಸ್ತ್ರೀಯರು ರಾಣಿಯನ್ನು ಪಲ್ಲಕ್ಕಿಯಲ್ಲಿ ಕೂಡಿಸಿಕೊಂಡು ಮೆರವಣಿಗೆ ಹೊರಟಿರುವ ದೃಶ್ಯವಿದೆ. ಈ ದೃಶ್ಯದ ಮೇಲ್ಭಾಗದಲ್ಲಿ ಕಮಲದ ಮಗ್ಗಲಲ್ಲಿ ಹಾರಗಳನ್ನು ರಚಿಸಿದ್ದಾರೆ ಮತ್ತೊಂದು ಅಂಕಣದಲ್ಲಿ ಕಿರೀಟಾದ ಗಡ್ಡ ಬಿಟ್ಟಿರುವ ವ್ಯಕ್ತಿ ಒಂಟೆಯ ಮೇಲೆ ಕುಳಿತು ಸವಾರಿ ಹೊರಡಿರುವ

ಚಿತ್ರಣವಿದೆ. ಅವನ ಮುಂದೆ. ಆನೆ ಅದರ ಜೊತೆಗೆ ನವನಾರೀ ಕುಂಜರ ಮತ್ತು ಪಂಚನಾರೀ ತುಂಗ ಚಿತ್ರಗಳನ್ನು ರಚಿಸಲಾಗಿದೆ. ಇವುಗಳ ಮುಂದೆ ಚಾಮರ, ಹಿಡಿದ ಮತ್ತು ವಸ್ತ್ರ ಹರಾಡಿಸುತ್ತಿರುವ ಸ್ತ್ರೀಯರನ್ನು ಚಿತ್ರಿಸಿದ್ದಾರೆ.

ಹಂಪಿ ವರ್ಣಚಿತ್ರಗಳಿಗೂ ಮತ್ತು ಲೇಪಾಕ್ಷಿಯ ವರ್ಣಚಿತ್ರಗಳಲ್ಲಿ ಸಾಕಷ್ಟು ಭೇದವಿದೆ, ಶೈಲಿಯಲ್ಲಿ ಮತ್ತು ಸಂಯೋಜನೆಯಲ್ಲಿ, ಭಿನ್ನತೆಯಿದೆ, ಲೇಪಾಕ್ಷಿಯ ವರ್ಣಚಿತ್ರಗಳು ಮತ್ತು ಹಂಪಿಯ ವರ್ಣಚಿತ್ರಗಳ, ಚೌಕಗಳಲ್ಲಿ ಇದ್ದರೂ ಇಲ್ಲಿ ಕೆಲವು ಚಿತ್ರಗಳ ಮೇಲ್ಭಾಗದಲ್ಲಿ, ತೋರಣದಂತಹ ಅಲಂಕಾರವಿದ್ದ ಇಂತಹ ತೋರಣದ ಅಲಂಕಾರ ಲೇಪಾಕ್ಷಿಯಲ್ಲಿ ಕಾಣಿಸುವುದಿಲ್ಲ ಇಂತಹ ತೋರಣ ೧೭ನೆಯ ಶತಮಾನದ ವರ್ಣ ಚಿತ್ರಗಳಲ್ಲಿ ಮೊದಲು ಕಾಣಿಸಿಗುತ್ತದೆ. ಅಲ್ಲದೇ ಆನೇಕ ವರ್ಣಚಿತ್ರಗಳಲ್ಲಿ ದೇವಾಲಯಗಳ ಚಿತ್ರಗಳು ಮತ್ತು ಈ ದೇವಾಲಯಗಳ ಎರಡೂ ಬದಿಯಲ್ಲಿ ತೆಂಗಿನ ಮರದ ಚಿತ್ರಗಳನ್ನು ಬಿಡಿಸಿದ್ದಾರೆ. ಈ ರೀತಿಯ ಭಿತ್ತಿ ವರ್ಣ ಚಿತ್ರದ ಹಂಚಿನಲ್ಲಿ ದೇವಾಲಯದ ಶಿಖರಗಳು ಲೇಪಾಕ್ಷಿಯಲ್ಲಿ, ಕಾಣಿಸುವುದಿಲ್ಲ.

ಕರ್ನಾಟಕ ಮತ್ತು ಭಾರತ ದೇಶದಲ್ಲಿರುವ, ವಿಜಯನಗರ ಸಾಮ್ರಾಜ್ಯದ ಭಾಗಗಳಲ್ಲಿರುವ ಭಿತ್ತಿ ಚಿತ್ರಗಳಂತೆಯೇ ಹಂಪಿಯ, ಭಿತ್ತಿ ಚಿತ್ರಗಳಲ್ಲಿಯಾ ರೇಖೆಗಳಂತೇ ಪ್ರಧಾನಾಂಕ ಅಂತರಗಳನ್ನು ಆವರಿಸಿ ಕಲ್ಪನೆಗಳಿಗೆ ಖಚಿತ ರೂಪು ಕೊಡುವುದು, ಈ ರೇಖಾಚಿತ್ರಗಳ ಮತ್ತು ವಸ್ತು ಬಹುತೇಕ ರಾಮಾಯಣ ಮಹಾಭಾರತ, ಭಾಗವತ ಹಾಗೂ ಇತರ ಪುರಾಣಗಳಿಂದ ಆರಿಸಲಾದ ಕಥಾ ಸಂದರ್ಭಗಳ ಚಿತ್ರಗಳು ಬಹುಶಃ ಎರಡನೇ ಅಯಾಮಉಳ್ಳವು ಘನಾಕೃತಿಯನ್ನು ಪ್ರಾಯಶಃ ಇಲ್ಲಿ ಲೌಕಿಕ ಜೀವನ ಸಂದರ್ಭಗಳನ್ನು ನಿರೂಪಿಸುವಾಗ ವಿನಾರೂಪ ನಿರ್ಮಾಣದಲ್ಲಿ ಅವುಗಳ ಅಲಂಕಾರದಲ್ಲಿ ಹೇಳಲಾದ ಭಿತ್ತಿಚಿತ್ರಗಳ ವಿಜಯನಗರದ ದೇಶ ವಿದೇಶಿಯ ಸಾಮಾನ್ಯ ಜನರಲ್ಲಿ ಪ್ರತಿಬಿಂಬಿಸುವಂತಹ ಇತಿಹಾಸದ ಅದ್ಭುತದ ಭಿತ್ತಿಚಿತ್ರದ ವಿನ್ಯಾಸವನ್ನು ಬೆಳಕನ್ನು ನೀಡುವ ಹಾಗೂ ಜನರ ಮನದಲ್ಲಿ ಹಾದಿ, ಮುಕಿಯದೆ ವಿಜಯ ನಗರದ(ಹಂಪಿ)ಯ ವರ್ಣ ಭಿತ್ತಿ ಚಿತ್ರದ ಅಮೂಲ್ಯ ಬೆಳವಣಿಗೆಯಾಗಿದೆ.

### ೩.೪. ಸ್ಮಾರಕ ಉಬ್ಬುಶಿಲ್ಪಗಳು

ವಿಜಯನಗರ ಕಾಲವನ್ನು ಆಧುನಿಕ ಯುಗದ ಆರಂಭಿಕ ಕಾಲವೆಂದು ಪರಿಗಣಿಸಲಾಗಿದೆ. ಆದಿಮ ಸಂಸ್ಕೃತಿಯ ಉಗಮದಿಂದ ಐತಿಹಾಸಿಕ ದಾಖಲೆಗಳು ದೊರೆಯುವರೆಗಿನ ಕಾಲಮಾನವನ್ನು ಆದಿಮಯುಗವೆಂದು, ಅನಂತರ ಹೊಯ್ಸಳರ ಅಂದಿನ ಕಾಲದವರೆಗಿನ ಕಾಲಘಟ್ಟವನ್ನು ಮಧ್ಯಯುಗವೆಂದು ಇತಿಹಾಸಕಾರರು ವಿಭಾಗಿಸಿದ್ದಾರೆ. ವಿಜಯನಗರದ ನಿಕಟಪೂರ್ವ ಅರಸರೆಂದರೆ ಹೊಯ್ಸಳರೇ ಆಗಿದ್ದಾರೆ ೧೪ನೆಯ ಶತಮಾನದ ಅಂತ್ಯದಲ್ಲಿ ಹೊಯ್ಸಳರ ಪತನವಾಗುತ್ತಿದಂತೆಯೇ ವಿಜಯನಗರದ ಅರಸರು ತಲೆಯೆತ್ತಿದ್ದರು."[೨೨] ವಾಸ್ತುಶಿಲ್ಪ ಚಿತ್ರಕಲೆಯ ದೃಷ್ಟಿಯಿಂದ ಅವರೆಗೆ ಬೆಳೆದು ಬಂದಿದೆ ಶೈಲಿ ಮಾಧ್ಯಮ ಅಕಾರಗಳು ಗಾತ್ರದ ಇತಿಮಿತಿಗಳ ಶಿಲ್ಪಗಳನ್ನು ಅನೇಕ ರೀತಿಯ ಶಿಲ್ಪಗಳು

ವಿಜಯನಗರದ ದೇವಾಲಯಗಳ ಬಹುತೇಕ ಕಾಲದ, ನಕ್ಷಾತ್ರಾಕಾರದ ತಳ ವಿನ್ಯಾಸ, ಹೊರ ಭಿತ್ತಿಯಲ್ಲಿ ಅದಿಪಾನದಿಂದ ಹಿಡಿದು ಗೋಪುರದವರೆಗೆ ಅತ್ಯಂತ ಸೂಕ್ಷ್ಮವಾದ ಕೆತ್ತನೆಗಳಿಂದ ಕೂಡಿದ ಚಿಕ್ಕ ದೊಡ್ಡ ಶಿಲ್ಪಗಳು, ದೇವಾಲಯದ ಒಳಭಾಗದಲ್ಲಿ ಗಡತಿಯಿಂದ (ಲೇತ) ತಿರುಗಿಸಿ ನಿರ್ಮಿಸಿದ ಕಂಬಗಳು ಆಳವಾದ, ಭುವನೇಶ್ವರಿ ಹಲವಾರು ಶಾಖ ಪಟ್ಟಿಕೆಗಳಿಂದ ಕೂಡಿದ ದ್ವಾರ ಬಂಧ ನೈಜ ಅಳತೆಯ ದ್ವಾರಪಾಲಕರು ಇವೇ ಮುಂತಾದ ಶಿಲ್ಪ ಲಕ್ಷಣಗಳಿಂದ ಕೂಡಿದೆ.

ಕ್ರಿ.ಶ. ೧೩೪೨ ಹೊಯ್ಸಳ ಸಾಮ್ರಾಜ್ಯ ಅಸ್ತಂಗತವಾಗುತ್ತಿದ್ದಂತೆಯು ವಿಜಯನಗರದ ಸಂಗಮ ವಂಶದ ಅರಸರು ಚೌಕ ಅಥವಾ ಆಯಾತಾಕಾರದ ಗರ್ಭಗೃಹ, ಅಂತರಾಳ, ಸುಖನಾಸಿ, ಮುಖ ಮಂಟಪಗಳಿಂದ ಕೂಡಿದ ಸಪಾಟಾದ ಹೊರಭಿತ್ತಿಯ ಬೃಹದಾಕಾರದ ಕಂಬಗಳಿಂದ ಕೂಡಿದ ಅಷ್ಟು ಸೂಕ್ತವಾದ ಕೆತ್ತನೆಗಳಿಲ್ಲದ, ದೇವಾಲಯಗಳನ್ನು ನಿರ್ಮಿಸಿದರು. ಹೀಗೆ ವಿಜಯನಗರದ ಪ್ರತಿಯೊಂದರ ಶಿಲ್ಪಗಳ ಹಿನ್ನೆಲೆಯ ಇತಿಹಾಸವನ್ನು ಸಾಮಾಜಿಕ ಕಲೆಯ ಬೆಳೆಯುವ ದಾರಿಯಾಗಿದೆ. ಹದಿಮೂರು ಶತಮಾನಗಳಷ್ಟು ದೀರ್ಘ ಕಾಲದಿಂದ ಬೆಳೆದು ಬಂದಿದ್ದ ವಾಸ್ತುಶಿಲ್ಪ ಮೂರ್ತಿ ಶಿಲ್ಪಗಳು ಪುಸ್ತಕದ ಪುಟ ಮಗುಚಿ ಹಾಕಿದಂತೆ ಒಮ್ಮೆಗೆ ಅದೃಶ್ಯವಾಗಿ ಹೊಸತಾದ ಮೂರ್ತಿ ಶಿಲ್ಪಗಳು ಮತ್ತು ವಾಸ್ತುಶಿಲ್ಪಗಳು ಪರಂಪರೆಯೊಂದು ಅವಿಷ್ಕಾರಗೊಂಡಿತು.

**ನರಸಿಂಹ**

"ಸಾಮಾನ್ಯವಾಗಿ ನರಸಿಂಹನು ಹಿರಣ್ಯಕಶಿಪುವನ್ನು ವಧಿಸುತ್ತಿರುವಂತೆ, ಕಂಡಿಸಲಾಗಿರುತ್ತದೆ, ಮುಖ್ಯವಾಸಗಿ ಬಾದಾಮಿಯಲ್ಲಿರುವ ಶಿವಾಲಯದ ಉತ್ತರ ಗೋಡೆಯ ಶಿಲ್ಪದಲ್ಲಿ ಅಷ್ಟಭುಜದ ನರಸಿಂಹನು ತೊಡೆಯ ಮೇಲೆ ಅಸುರನನ್ನು ಎತ್ತಿಕೊಂಡು ಆತನ ಕರುಳು ಕೀಳುತ್ತಿದ್ದಾನೆ ಮತ್ತು ಮಹಾಕೂಟದ ಮಹಾಲಿಂಗ ದೇವಾಲಯದ ದೇವಕೋಷ್ಠದಲ್ಲಿ ನರಸಿಂಹನು ನಿಂತುಕೊಂಡು ಅಸುರನ ಹೊಟ್ಟೆಯನ್ನು ಸೀಳುತ್ತಿದ್ದಾನೆ."[೨೩] ಹೀಗೆ ದುಷ್ಟರನ್ನು ವಧಿಸುವ ಚಿತ್ರಗಳನ್ನು ಗಮನಿಸಬಹುದು ಹಾಗೂ ಹಂಪಿಯಲ್ಲಿರುವ ಎಲ್ಲಾ ಲಿಂಗಗಳಿಗಿಂತಲು ಅತ್ಯಂತ ಭಾರಿಯಾದುದು, ಇದು ಕರೇ ಕಲ್ಲಿನಿಂದ ನಿರ್ಮಿಸಲಾಗಿದೆ ಅತ್ಯಂತ ಸುಂದರವಾದ ಲಿಂಗ, ಇದರ ಎತ್ತರ ಸುಮಾರು ೧೨ ಅಡಿಗಳೊಂದಿದ ಗರ್ಭಗುಡಿಯುಂಟು ವ್ಯವಸಾಯ ಕಾಳುವೆಯು ಈ ಗುಡಿ ಮುಖಾಂತರ ಆಯ್ದು ಹೋಗುವುದರಿಂದ ಲಿಂಗವು ಮೂರಡಿ ನೀರಿನಲ್ಲಿ ಮುಳುಗಿರುತ್ತದೆ. ಹಂಪಿಯಲ್ಲಿ ಈ ಮೂರ್ತಿಯ ಬೃಹದಾಕಾರದ ಮೂರ್ತಿ ಇದನ್ನು ೧೫೨೮ರಲ್ಲಿ ಕೃಷ್ಣದೇವರಾಯನ ಕಾಲದಲ್ಲಿ ಓರ್ವ ಬ್ರಾಹ್ಮಣನಿಂದ ನಿರ್ಮಿಸಲ್ಪಟ್ಟಿತೆಂದು ಜನಸಾಮಾನ್ಯರಲ್ಲಿ ಮೂಡಿಬಂದ ಸಂಗತಿಯಾಗಿದೆ.

**ರಾಮ**

ಚಾಲುಕ್ಯರ ರೂವಾರಿಗಳು ಎಲ್ಲಿಯೂ ರಾಮನ ಬೃಹದಾಕಾರದ ಶಿಲ್ಪವನ್ನು ಕಂಡಿರಲಿಲ್ಲ ಆದರೆ ಕಥಾನಿಕ ಶಿಲ್ಪಗಳ ಮೂಲಕ ರಾಮಾಯಣ ವಿವಿಧ ಸನ್ನಿವೇಶಗಳನ್ನು ಕೆತ್ತನೆ ಮಾಡಿದ್ದ

ಪಾಪಿನಾಥ ದೇವಾಲಯದ ಹೊರಗೋಡೆಗಳಲ್ಲಿ ಕಾಣುತ್ತವೆ. ಐಹೊಳೆಯ ಮಾರ್ಗ ಗುಡಿಯ ಅದಿಷ್ಠಾನ ಮಂಟಪ ಮತ್ತು ಹಂಪಿಯ ವಿರೂಪಾಕ್ಷ ದೇವಾಲಯದ ಕಂಬಗಳಲ್ಲಿ ರಾಮಾಯಣದ ಹಲವಾರು ಚಿತ್ರಗಳನ್ನು ಹೊಂದಿವೆ. ಹಂಪಿಯ ಸ್ಮಾರಕಗಳಲ್ಲಿನ ಅನೇಕ ರೇಖಾ ಚಿತ್ರಗಳನ್ನು ಗಮನಿಸಿದಾಗ ಹಂಪಿಯ ದೇವಾಲಯಗಳಲ್ಲಿ ಚಾಲುಕ್ಯರ ಕೆತ್ತನೆಯ ಶಿಲ್ಪಗಳನ್ನು ಕಾಣಬಹುದಾಗಿದೆ.

**ಶೈವ ಶಿಲ್ಪಗಳು**

ಚಾಲುಕ್ಯ ಅರಸುಮನೆತನದ ಕೊನೆಯ ಅರಸರು ಶೈವರಾಗಿದ್ದರು. ಅವರ ಅನಂತರದ ದೇವಾಲಯಗಳು ಐಧಾನವಾಗಿ ಶಿವ ದೇವಾಲಯಗಳಾಗಿವೆ. ಈ ಕಾರಣದಿಂದಾಗಿ ಚಾಲುಕ್ಯರ ಶೈವ ಶಿಲ್ಪಗಳು ಹೇರಳವಾಗಿ ಹಂಪಿಯ ಸ್ಮಾರಕಗಳಲ್ಲಿ ಕಂಡುಬರುತ್ತವೆ. ವಿಜಯನಗರ ಅರಸರ ಕಾಲದ ಶಿಲ್ಪಗಳು ಜನಸಾಮಾನ್ಯರಲ್ಲಿ ಪ್ರತಿಬಿಂಬಿಸುವಂತಹ ಶೈವ ಶಿಲ್ಪಗಳ ಚಿತ್ರಗಳಾಗಿದ್ದವು ಎಂಬುದನ್ನು ಹಂಪಿಯ ದೇವಾಲಯಗಳಲ್ಲಿ ನೋಡಿದರೆ ಅವುಗಳ ಗೋಡೆ, ಕಂಬಗಳ ಮೇಲಿನ ಶಿವ, ಶಿವಲಿಂಗದ ಕೆತ್ತನೆಯನ್ನು ನೋಡಿದರೆ ತಿಳಿದುಬರುತ್ತದೆ.

**ವೀರ/ಮಾಸ್ತಿಕಲ್ಲು**

"ವಿಜಯನಗರ ಕಾಲದಲ್ಲಿ ಒಂದೇ ಎಡೆಯಲ್ಲಿ ಹದಿನೈದು ಇಪ್ಪತ್ತು ವೀರ/ಮಾಸ್ತಿಕಲ್ಲುಗಳಿಂದ ಹಿಡಿದು ನೂರಾರು ಸ್ಮಾರಕ ಶಿಲೆಗಳು ದೊರೆಯುತ್ತವೆ."[೨೪] ಕೋಲಾರ ಜಿಲ್ಲೆಯ ಅರಾಬಿ ಕೊತ್ತನೂರಿನಲ್ಲಿ ಸಮಾರು ನೂರಮೂವತ್ತು ಕಲ್ಲುಗಳಿವೆ. ಉತ್ತರ ಕನ್ನಡ ಜಿಲ್ಲೆಯು ಸಹ ಸಿದ್ದಾಪುರ ಹಾಗೂ ಅಲಸೆಯ ಪ್ರದೇಶದಲ್ಲಿ ಬೃಹದಾಕಾರದ ಸುಂದರ ಶಿಲ್ಪಿಗಳಿಂದ ಕೂಡಿದೆ ವೀರ/ಮಾಸ್ತಿಕಲ್ಲುಗಳನ್ನು ಕಾಣಬಹುದು. ಇವು ಒಂದು ಜನಾಂಗದವರು ತಮ್ಮ ಪದ್ಧತಿಯಂತೆ ಕಲ್ಲು ಹಾಕಿಸಿರಬಹುದಾದ ಸಾಧ್ಯತೆಯಿದೆ ವೀರಗಾರರ ಗುಡಿಯಂದೆ ಒಂದು ಜನಾಂಗದವರ ಆಚರಣೆ ಸಂಬಂಧಿ ಶಿಲ್ಪಗಳನ್ನು ಹೊಂದಿರುವಂಥದಾಗಿವೆ. ಇವು ಸಹ ಕಾಲ್ಪನಿಕ ವೀರ/ಮಾಸ್ತಿಯವರಿಗೆ ಸಂಬಂಧಿಸಿದ್ದಾಗಿವೆ.

**ಜನಪದ ಶಿಲ್ಪಗಳು**

ಜನಪದ ಶಿಲ್ಪಗಳು ಸಾಹಿತ್ಯವೂ ಸೇರಿದಂತೆ, ನಾಟಕ, ಚಿತ್ರ ಶಿಲ್ಪಗಳಲ್ಲಿ ಶಿಷ್ಟ ಹಾಗೂ ಜನಪದ ಪ್ರಕಾರಗಳ ಬಗ್ಗೆ ಚರ್ಚಿಸಲಾಗಿವೆ ಜನಪದ ಶೈಲಿಗೆ ಸಂಬಂಧಿಸಿದಂತೆ ತಾಳಮಾನವನಗಳಿಗೆ ಅಳವಡಿಸಿದ ಹಾಗೂ ಆಗಮ ಶಾಸ್ತ್ರವನ್ನು ನಿಖರವಾಗಿ ಪಾಲಿಸದ ಶಿಲ್ಪಗಳನ್ನು ಜನಪದ ಶಿಲ್ಪ ಎಂದು ಪರಿಗಣಿಸಲಾಗಿದೆ. ಇಂದು ಹಂಪಿಯಲ್ಲಿ ಯಾವುದೇ ಗರ್ಭಗುಡಿಯಲ್ಲಿ (ಶೈವೇತರ) ಮೂಲ ಮೂರ್ತಿ ಇಲ್ಲದಿರುವುದರಿಂದ ಅವುಗಳ ರೂಪ ತಿಳಿಯಲಾಗದು ಆದರೆ ಒಟ್ಟು ದೇವಾಲಯಗಳ ಕಂಬದ ಮೇಲಿನ ಶಿಲ್ಪಗಳ ವಿಜಯದಶಮಿ ದಿಬ್ಬದಮೇಲಿನ ನೂರಾರು ಶಿಲ್ಪಗಳು ಕಿರುಗಾತ್ರದಲ್ಲಿದ್ದರು ಪ್ರಮಾಣಬದ್ದವಾಗಿವೆ. ವೀರಗಲ್ಲುಗಳು ಮಾಸ್ತಿಕಲ್ಲುಗಳು ಶೃಂಗಾರ ಶಿಲ್ಪಗಳು ಗಾರೆಶಿಲ್ಪಗಳು ಜನಪದ

ಶೈಲಿಯಲ್ಲಿ ಕಾಣಬಹುದು. ಇವುಗಳೆಲ್ಲವು ದೇವಾಲಯ ದೇವತೆಗಳ ಚಿತ್ರಣಕ್ಕಿಂತ ಸಾಮಾಜಿಕ ಸಂಗತಿಗಳೇ ಅಧಿಕವಾಗಿ ಕಂಡುಬರುತ್ತವೆ.

ವೀರಗಲ್ಲುಗಳಲ್ಲಿ ಬೇಟೆ ವೇಳೆಯಲ್ಲಿ ಮಡಿದ ವೀರನ ಬಗ್ಗೆ ಶಿಲ್ಪವಿದ್ದರೂ ಬೇಟೆಯ ಚಿತ್ರಗಳು ಅಲ್ಲಲ್ಲಿ ಕಂಡುಬರುವುದುಂಟು. ಮಹಾನವಮಿ ದಿಬ್ಬದಲ್ಲಿ ಹಲವಾರು ಮಂದಿ ಈಟಿ ಹಿಡಿದು ಆನೆಯೊಂದನ್ನು ಹಿಂಬದಿಯಿಂದ ತಿವಿಯುತ್ತಿದ್ದು ಆನೆ ಮುಂಗಾಲುಗಳಲ್ಲಿ ಒಬ್ಬಾತನನ್ನು ಮೆಟ್ಟಿ ಸೊಂಡಲಿನಿಂದ ಹಿಡಿದು ಸೀಳುತ್ತಿರುವಂತೆ ಶಿಲ್ಪಿಸಿದ್ದು ಆನೆಗೆ ಮದವೇರಿದಂತೆ ಕಂಡು ಬರುವ ಚಿತ್ರಗಳನ್ನು ಕಾಣಬಹುದು.

"ಬೇಟೆಯ ನಂತರ ಪ್ರಾಣಿಗಳನ್ನು ಕಾಲು ಕಟ್ಟಿ ಗಳದ ಮೇಲೆ ಹೊತ್ತು ಬರುತ್ತಿರುವುದು ಮಾಂಸವನ್ನು ಬೇಯಿಸುತ್ತಿರುವುದು ಶಿಲ್ಪಿತವಾಗಿವೆ."[೨೫] ಕೆಲವೆಡೆ ಶಿರಾತ ದಂಪತಿಗಳ ಶಿಲ್ಪಗಳಿದ್ದು ವಿಶಿಷ್ಟವಾದ ಉಡುಗೆಗಳಿಂದ ಕೂಡಿವೆ ಕೈಯಲ್ಲಿ ಬಿಲ್ಲು ಬಾಣ ಹಿಡಿದು ಕಿರಾತಿಯ ಕಾಲಿಗೆ ಚುಚ್ಚಿರು ಮುಳ್ಳನ್ನು ತೆಗೆಯುತ್ತಿರುವ, ಆಕರ್ಷಕ ಭಂಗಿಯಲ್ಲಿ ನಿಂತಿರುವ ಕಿರಾತಿಯ ಶೃಂಗಾರಿಸಿದ ಉಬ್ಬು ಶಿಲ್ಪಗಳು ವಿಜಯನಗರದ ಕಂಬಗಳ ಮೇಲೆ ಅಧಿಕವಾಗಿ ದೊರೆಯುತ್ತವೆ. ಕಿರಾತಾರ್ಜುನದ ಉಬ್ಬು ಶಿಲ್ಪಗಳನ್ನು ಶೃಂಗೇರಿ, ಮೇಲುಕೋಟೆ, ನಂದಿಬೆಟ್ಟ, ಲೇಪಾಕ್ಷಿ ಇತ್ಯಾದಿ ಕಡೆಗಳಲ್ಲಿ ಕಾಣಬಹುದು ಮತ್ತು ಉದ್ದನೆಯ ಇಳಿಜಾರು ತೊಟ್ಟು ತಲೆಯಿಂದ ಪಾದದವರೆಗೆ ಕಂಬಳಿಯ ಗೊರಬು ಹಾಕಿಕೊಂಡು ಕೈಯಲ್ಲಿ ಬಡಿಗೆಯನ್ನು ಹಿಡಿದು ಅಥವಾ ಬಡಿಗೆಯ ಮೇಲೆ ಎರಡು ಕೈಯಿರಿಸಿ ಆದರೆ ಮೇಲೆ ತಲೆ ಅನಿಸಿದಂತಿರುವ ಬಿಡಿ ಶಿಲ್ಪಗಳು ಸಾಮಾನ್ಯವಾಗಿ ವಿಜಯನಗರ ಕಾಲದ ಎಲ್ಲಾ ದೇವಾಲಯಗಳಲ್ಲೂ ಕಾಣಿಸುತ್ತಿದ್ದವು.

"ವಿಜಯದಶಮಿ ಮೆರವಣಿಗೆಯಲ್ಲಿ ಹಲವಾರು ಬಗೆಯ ಜನಪದರ ಪ್ರದರ್ಶನ ಕಲೆಯ ಬಗ್ಗೆ ಸಮಕಾಲೀನ ಪ್ರವಾಸಿಗರು ಹೇಳಿರುವುದನ್ನು ಶಿಲ್ಪಗಳಲ್ಲಿಯು ಗುರುತಿಸಲಾಗಿದೆ."[೨೬] ಇಲ್ಲಿ ಮುಖ್ಯವಾಗಿ ಕೋಲಾಟ ಇಬ್ಬಿಬ್ಬರು ಸ್ತ್ರೀಯರು ಎರಡು ಕೈಗಳಲ್ಲಿ ಕೋಲುಗಳನ್ನು ಹಿಡಿದು ಪಾದಗಳನ್ನು ಎತ್ತರಿಸಿ ಕುಣಿಯುತ್ತಾ ಕೋಲು ಹುಯ್ಯುತ್ತಿರುವ ತೇರಾಚಲನ ಶೀಲ ಗಡಿಯಲ್ಲಿರುವ ಇಡೀ ಉಬ್ಬು ಶಿಲ್ಪಗಳ ಚಿತ್ರದಲ್ಲಿ ಸಂಯೋಜನೆಯಲ್ಲಿ ಕಂಡುಬರುತ್ತವೆ.

ಹಲವಾರು ಚಿತ್ರಗಳು ಇಲ್ಲಿನ ಉಬ್ಬು ಶಿಲ್ಪಗಳಲ್ಲಿ ನೃತ್ಯ ಭಂಗಿಯಲ್ಲಿರುವ ಕಣಿ ಹೇಳುವ ಕೊರವಂಜಿ ಕೈಗಳನ್ನು ನೆಲದ ಮೇಲೆ ಇರಿಸಿ ಕೊಂಡಿರುವ ದೊಂಬರಾಟದವರು ಪುಂಗಿಯೂದುತ್ತಾ ಬುಟ್ಟಿಯಿಂದ ಹಾವೂ ತೆಗೆದು ಆಡಿಸುತ್ತಿರುವ ಹಾವಾಡಿಗರು ಒಂದು ಕೈಯಲ್ಲಿ ಬುಡುಬುಡುಕೆ ಹಾಗೂ ಇನ್ನೊಂದರಲ್ಲಿ ಹಾವು ಹಿಡಿದು ಆಡಿಸುತ್ತಿರುವ ಹಾವಾಡಿಗಿತ್ತಿ, ಕೋತಿ ಆಡಿಸುತ್ತಿರುವವರು ಇತ್ಯಾದಿ ಹಲವಾರು ಸಾಮಾಜಿಕ ವಿಷಯಗಳು ವಿಜಯನಗರ ಕಾಲದಲ್ಲಿ ಉಬ್ಬು ಶಿಲ್ಪಕಲೆಯಲ್ಲಿ ಸೇಪರ್ಡೆಯಾಗಿ ಜನಸಾಮಾನ್ಯರ ಮನದಲ್ಲಿ ಸದಾ ಅಚುಳಿದ ಸಾಮಾಜಿಕ ಶಿಲ್ಪಕಲೆಯಾಗಿದೆ.

## ೩.೫. ಗಾರೆ ಶಿಲ್ಪಗಳು

"ಪ್ರಾಚೀನ ಕಾಲದಿಂದಲೂ ಗಾರೆಯನ್ನು ವಾಸ್ತು ರಚನೆಗಳಲ್ಲಿ ನಿರಂತರವಾಗಿ ಬಳಸಲಾಗುತ್ತಿದೆ. ಸಾಮಾನ್ಯವಾಗಿ ಇಟ್ಟಿಗೆ ಜತೆ ಗಾರೆ ಬಳಕೆಯನ್ನು ಕಾಣುತ್ತೇವೆ. ಕರ್ನಾಟಕದಲ್ಲಿ ಶಾತವಾಹನರ ಕಾಲದಲ್ಲೇ ಕಟ್ಟಡಗಳ ರಚನೆಗೆ ಗಾರೆಯನ್ನು ಉಪಯೋಗಿಸಲಾಗಿದೆ."[೨೭] ಇದರ ಪ್ರತೀಕವೇನೆಂದರೆ ಗಾರೆಯು ಮತ್ತು ಇಟ್ಟಿಗೆಯು ವಾಸ್ತು ಬಳಕೆ ತುಂಬಾ ಬೇಕಾಗುವ ವಿಧಿವಿಧಾನಗಳಾಗಿವೆ. ಗಾರೆಯನ್ನು ಗಚ್ಚನ್ನುಗಳಿಂದ ತಯಾರಿಸಲಾಗಿದೆ. ಅನೇಕ ದೇವಾಲಯಗಳ ಗೋಪುರಗಳಿಗೆ ಅಲಂಕಾರಿಕವಾಗಿ ಬಳಕೆಯ ವಸ್ತುಗಳಾಗಿದ್ದವು. ಹಂಪಿಯ ಸಾಸಿವೆಕಾಳು ಗಣಪತಿ ಮತ್ತು ಸರಸ್ವತಿ ದೇವಾಲಯಗಳಲ್ಲಿನ ಕಂಬಗಳು ಮತ್ತು ಚಾವಣಿಯನ್ನು ಗಾರೆಯಿಂದ ಲೇಪನದಿಂದ ನಯಗೊಳಿಸಿ ಅಲಂಕರಣ ಮಾಡುತ್ತಿದ್ದ ಕುರುಹುಗಳು ಸ್ಪಷ್ಟವಾಗಿ ಕಂಡುಬರುತ್ತವೆ. ಚಂದ್ರವಳ್ಳಿ, ಬನವಾಸಿ, ವಡಗಾಂವ್, ಮಾಧವಪುರದಲ್ಲಿ ನಡೆದ ಉತ್ಖನನಗಳು ಇಟ್ಟಿಗೆ ಕಟ್ಟಡಾವಶೇಷಗಳನ್ನು ಬೆಳಕಿಗೆ ತರಲಾಗಿತ್ತು. "ಗಾರೆಯ ತಯಾರಿಕೆಗಳಿಂದ ಬಿದ್ದ ಮಳೆನೀರು ಸುಲಭವಾಗಿ ಹರಿದು ಹೋಗಲು ಕಟ್ಟಡಗಳ ಮೇಲ್ಭಾಗದಲ್ಲಿ ಗಾರೆ ಗಚ್ಚಿನಿಂದ ಮಾಡಲಾಗಿದೆ. ಹಂಪಿಯಲ್ಲಿ ಕೆಲವು ದೇವಾಲಯಗಳ ವಸತಿ ಮತ್ತು ರಕ್ಷಣಾ ಕಟ್ಟಡಗಳಲ್ಲಿ ಗಾರೆ ಬಳಕೆಯು ಇದ್ದುದ್ದು ಕಾಣುತ್ತದೆ. ಮತ್ತು ತಿಮ್ಮಲಾಪುರದ ದೇವಾಲಯಗಳಲ್ಲಿ ಕಾಣಬಹುದಾಗಿದೆ."[೨೮] ಈಗಲು ಉಳಿದಿರುವ ರಾಣಿಯರ ಸ್ನಾನಗೃಹ, ಕಮಲಮಹಲ್, ಕಾವಲು ಗೋಪುರಗಳು, ಆನೆಲಾಯ ಮುಂತಾದ ಕಟ್ಟಡಗಳು ಮಧ್ಯಕಾಲೀನ ಗಾರೆ ನಿರ್ಮಾಣವನ್ನು ಜೀವಂತ ಉದಾಹರಣೆಗಳಾಗಿವೆ. ಹೀಗೆ ಗಾರೆಯ ಬಳಕೆಯ ಆಗಿನ ಅರಸರುಗಳಿಂದ ಬೆಳದುಬಂದ ವಿಧಾನಗಳಾಗಿವೆ. ಗಾರೆಯ ಬಳಕೆಯು ಬಹಳ ಕಠಿಣಕರವಾದ ಸಂಗತಿಯಾಗಿದೆ.

"ಗಾರೆಯ ಶಿಲೆಗಳು ಮಾನವಾಕಾರದ ಬೃಹದಾಕಾರದ ಶಿಲ್ಪಗಳೆಲ್ಲವೂ ದೇವಶಿಲ್ಪಗಳು. ಆದರೆ ದೇವರ ಶಿಲ್ಪಗಳೆಲ್ಲವೂ ಕಾಣಿಸಿಕೊಳ್ಳಬಲ್ಲ, ಕಾಣಿಸಿಕ್ಕೊಳ್ಳಬಲ್ಲ ಗಾರೆಶಿಲ್ಪದಲ್ಲಿ ಮತ್ತು ಕಿರುಶಿಲ್ಪಗಳಲ್ಲಿ ನೆಲೆಸಬಲ್ಲ, ಆತನು ಅಣುವಾಗಬಲ್ಲ, ಅವಕಾಶವಾಗಬಲ್ಲ. ಅಂತೆಯೇ ದೇವಶಿಲ್ಪಗಳು ಎಲ್ಲ ಗಾತ್ರಗಳಲ್ಲಿ ಕೆತ್ತಿಸಿಗೊಂಡಿವೆ. ಆದಾಗ್ಯೂ ಪ್ರಧಾನಕ್ಕೆ ಅನುಗುಣವಾಗಿ ಶಿಲ್ಪಿಯು ಭವ್ಯಗಾತ್ರದ ಶಿಲ್ಪವನ್ನು ನಿರ್ಮಿಸಲು ಸಾಧ್ಯವಾಗದಿದ್ದಲ್ಲಿ ಈ ರೂವಾರಿಗಳು ದೇವಶಿಲ್ಪಗಳನ್ನು ಮಾನವ ಸಹಜ ಗಾತ್ರದಲ್ಲಿ ರೂಪಿಸಲು ಯತ್ನಿಸಲಾಗಿದೆ. ಕಲ್ಲಿನ ಶಿಲ್ಪಕಲೆಗೆ ಮತ್ತು ಗಚ್ಚಿನಿಂದ ಮಾಡಿದ ಗಾರೆ ಶಿಲ್ಪಕಲೆಯಲ್ಲಿ ತುಂಬಾ ಶಿಲ್ಪಿಯಲ್ಲಿ ಕಲೆಗಳನ್ನು ತಯಾರಿಸುವಂತಿಲ್ಲ ವ್ಯತ್ಯಾಸ ಕಂಡುಬರುವವು. ಒಂದು ಶಿಲ್ಪ ನಿರ್ಮಾಣಕ್ಕೆಂದು ಆಯ್ಕೆಮಾಡಿದ ಸ್ಥಳದಲ್ಲಿ ದೊಡ್ಡದಾದ ಮೂರ್ತಿಯನ್ನು ರೂಪಿಸಲು ಸಾಧ್ಯವಾಗದೆ."[೨೯] ಹೋದಾಗ ಮಾನವಾಕಾರದ ದೇಶಶಿಲ್ಪವು ಗಾರೆಶಿಲ್ಪಗಳಲ್ಲಿ. ಇದರಲ್ಲಿ ಅಲಂಕಾರಿಕ ಚಿತ್ರಗಳ ಬಳಕೆಯು ಸಾಮಾನ್ಯರ ಸಮಾಜದ ಜನಗಳಿಗೆ ಅರಿವು ಮೂಡಿಸುವುದಂತಾಗಿದೆ. ಶಿಲ್ಪಗಳ ತಯಾರಿಕದ ಸನ್ನಿವೇಶಗಳಿಂದ ಸಾಮಾಜಿಕ, ಧಾರ್ಮಿಕ, ಪೌರಾಣಿಕ, ಸಾಹಿತ್ಯದ ರೂಪದಲ್ಲಿ ಬಿಡಿಸುವಿಕೆಯಲ್ಲಿ ಬಹಳ ಪ್ರತಿರೂಪದ

ನೆಲೆಯನ್ನು ಕಾಣಬಹುದಾಗಿದೆ. ಗಾರೆಶಿಲ್ಪಗಳಾಗಿಲ್ಲ, ಕಲ್ಲಿನಲ್ಲಿ ಕೆತ್ತನೆ ಮಾಡಿದ ಶಿಲ್ಪಗಳಾಗಿಲ್ಲ. ಒಂದು ರೂಪದ ನೆಲೆಯಲ್ಲಿ, ಚಾರಿತ್ರಿಕ, ಧಾರ್ಮಿಕ ಕಲೆಯನ್ನು ಕಂಡುಕೊಳ್ಳಲು ಸಾಧ್ಯವಾಗಬಹುದು ಮತ್ತು ಇವುಗಳಿಂದ ಅನೇಕ ದೇವಾಲಯಗಳ ಅಲಂಕೃತ ಬಳಕೆಯು ಮಾನವನಿಗೆ ಬದುಕುವುದಕ್ಕೆ ಆರ್ಥಿಕತೆಯನ್ನು ಹೆಚ್ಚಿಸಿಕೊಳ್ಳಬಹುದಾಗಿದೆ. ಈ ಗಾರೆಶಿಲ್ಪಕಲೆಯು ವಿಜಯನಗರ ಅರಸರಿಂದ ಮತ್ತು ಚಾಲುಕ್ಯರ ಅರಸರುಗಳಿಂದ ಮೊದಲ ಬಾರಿಗೆ ಅಳವಡಿಸಿಕೊಂಡಿರುವ ಸಂಪ್ರದಾಯದ ಚಿತ್ರಗಳಾಗಿದ್ದವು.

**ಗಾರೆ ಶಿಲ್ಪಗಳ ರಚನೆ:** "ಗಾರೆಯ ಶಿಲ್ಪಗಳನ್ನು ರಚಿಸಲು ಬೇಕಾದ ಗಾರೆಯನ್ನು ಸಾಂಪ್ರದಾಯಿಕವಾಗಿ ತಯಾರಿಸುತ್ತಾರೆ. ಒಂದು ಭಾಗ ಸುಣ್ಣ, ಎರಡು ಭಾಗ ಮರಳು, ಒಂದು ಭಾಗ ಬೆಲ್ಲ ಮತ್ತು ಅರ್ಧ ಭಾಗ ಅಂಟುವಾಳದ ಕಾಯಿ ಮಿಶ್ರಣಗಳನ್ನು ನುಣ್ಣಗೆ ಅರೆದು ತಯಾರಿಸಲಾಗುತ್ತಿತ್ತು."[೩೦] ನಂತರದ ಶಿಲ್ಪಗಳನ್ನು ನಿರ್ಮಿಸುವ ಗೋಡೆಯಲ್ಲಿ ಶಿಲ್ಪಗಳ ಭಂಗಿಯನ್ನು ಅನುಲಕ್ಷಿಸಿ ಮರದ ಗೂಟ ಮತ್ತು ಕಡ್ಡಿಗಳ ಮೇಲ್ಮೈಗೆ ಗಾರೆಯನ್ನು ಹಂತ ಹಂತವಾಗಿ ಬಳಿದು ಒರಟು ಕೃತಿಯನ್ನು ಸಿದ್ದಪಡಿಸಲಾಗಿತ್ತು. ಗಾರೆಯ ಶಿಲ್ಪಕಲೆಯು ವಿಜಯನಗರದ ಅರಸರ ಕಾಲದ ಆಡಳಿತದಲ್ಲಿ ಅದ್ಭುತವಾದ ಶಿಲ್ಪ ರಚನೆಗಳು ಕಂಡುಬಂದವು ಮತ್ತು ಆ ಕೃತಿಯನ್ನು ಓರೆಕೋರೆಗಳನ್ನು ತಿದ್ದಿ ವಿಶೇಷವಾಗಿ ಕಂಡು ಬಂದಿರುವುದನ್ನು ಗಮನಿಸಲಾಗಿತ್ತು. ಗಾರೆಯ ಶಿಲ್ಪಕಲೆಗೆ ಆಕಾರ, ರೂಪ, ಬಣ್ಣಗಳ ಲೇಪನ ಅಂತಿಮವಾಗಿದೆ ರೂಪವನ್ನು ಅವರು ಕೊಡುತ್ತಿದ್ದರು. ಕೋಸ್ಕಿಬಣ್ಣವನ್ನು ಲೇಪಿಸಲಾಗುತ್ತಿತ್ತು ದೇವಾಲಯದ ಒಳಗಿರುವ ಲೋಹ ಮತ್ತು ಶಿಲ್ಪಗಳು ಪೂಜಾವಿಧಿಗಳಿಗೆ ಬಳಕೆಗೊಂಡರೆ ಹೊರಗಿರುವ ಗಾರೆಶಿಲ್ಪಗಳು ದೇವತೆಗಳು ಕತೆ ಮತ್ತು ಮಹಿಮೆಗಳನ್ನು ಅಲಂಕಾರಿಕ ಪ್ರದರ್ಶನ ಶಿಲ್ಪಗಳಾಗಿದ್ದವು. 

"ಪೂಜಾವಿಧಿಗಳಿಂದ ಮುಕ್ತವಾಗಿದ್ದ ಗಾರೆಶಿಲ್ಪಗಳು ದೇವಾಲಯದ ಸೌಂದರ್ಯವನ್ನು ಹೆಚ್ಚಿಸಿ ಭಕ್ತರ ಮನಸ್ಸಿಗೆ ನೆಮ್ಮದಿಯನ್ನು ನೀಡುತ್ತಿದ್ದವು"[೩೧] ಶಿಲೆ ಮತ್ತು ಮರ ಲೋಹ ಮತ್ತಿತರ ವಸ್ತುಗಳಿಗಿಂತ ಗಾರೆಶಿಲ್ಪಗಳ ರಚನೆ, ಕಾಲ ಮತ್ತು ಹಣದ ಮಿತವ್ಯಯಕಾರಿಯಾಗಿದೆ. ಬಹುಶಃ ಇದರಿಂದಲೆ ಗಾರೆ ಶಿಲ್ಪಗಳ ರಚನೆ ಜನಪ್ರಿಯಗೊಂಡಿರಬಹುದು, ಶಿಲ್ಪಗಳನ್ನು ರಚಿಸುವಾಗ ಪರಿಷ್ಕರಣೆಗಳಿಗೆ ವಿಪುಲವಾದ ಅವಕಾಶವಿದ್ದುದರಿಂದ ಎಷ್ಟು ಸಾಧ್ಯವೋ ಅಷ್ಟರಮಟ್ಟಿಗೆ ಶಿಲ್ಪಗಳನ್ನು ಸುಂದರಗೊಳಿಸಬಹುದಾಗಿತ್ತು. ಇನ್ನೂ ಗಾರೆಶಿಲ್ಪಗಳನ್ನು ಅಂದವಾಗಿ ಸೃಜನಶಿಲ್ಪ ಕಲೆಯಲ್ಲಿ ರಚನಾಕ್ರಿಯೆಯಲ್ಲಿ ಕಂಡುಬರುವಂತಹ ದೃಶ್ಯಗಳಾಗಿದ್ದವು. ಗಾರೆಶಿಲ್ಪಗಳ ಬಗೆಗೆ ಸ್ಪಷ್ಟವಾದ ಮಾಹಿತಿಯಿಲ್ಲವಾಗಿದೆ.

ವಿಜಯನಗರ ಕಾಲದ ಗಾರೆಶಿಲ್ಪಗಳನ್ನು ಶಿಲ್ಪಶಾಸ್ತ್ರದಲ್ಲಿ ಪರಿಣತಿ ಪಡೆದ ಶಿಲ್ಪಿಗಳೇ ನಿರ್ಮಿಸಿರಬೇಕು. ಏಕೆಂದರೆ ಆ ಕಾಲದ ಮರ, ಶಿಲೆ, ಲೋಹ ಮತ್ತು ಗಾರೆಶಿಲ್ಪಗಳ ರಚನೆಯಲ್ಲಿ ಒಂದು ತೆರನಾಗಿ ಕಂಡುಬರುತ್ತವೆ. ಅಂದರೆ ವಿಜಯನಗರ ಕಾಲದಲ್ಲಿ ಗಾರೆ ಕುಶಲಕಲೆಯಲ್ಲಿ ನುರಿತ ಶಿಲ್ಪಿಗಳ ಒಂದು ವರ್ಗವಿತ್ತೆಂಬುದು ಸ್ಪಷ್ಟವಾಗುತ್ತದೆ. ಹೀಗೆ ಮಧ್ಯಕಾಲದಲ್ಲಿ ಗಾರೆಶಿಲ್ಪಗಳ ರಚನೆ ಒಂದು ಜನಪ್ರಿಯ ಶಿಲ್ಪಕಲಾ ಮಾಧ್ಯಮವಾಗಿತ್ತು.

**ಶಿಲ್ಪಗಳು**

ನವ್ಯ ಶಿಲ್ಪಕಲೆ ಕಲ್ಲು ಮಣ, ಮರ, ಲೋಹ, ಲೋಹದ ತಾಂಡಗಳು ಗೋಣಗಿತಚ್ಯ, ಪೈಬರ್ ಗ್ಯಾಸ್, ರಬ್ಬರ್, ಪ್ಲಾಸ್ಟಿಕ್, ಪ್ಲಾಸ್ಟರ್, ಇತ್ಯಾದಿಗಳಿವೆ ಘನಾಕಾರ ಪಡೆಯಾಟ ಯಾವುದೇ ಪದಾರ್ಥಗಳು ಅರಳಬಹುದಾಯಿತು ಎಲ್ಲಾ ಸುತ್ತಮುತ್ತಲಿನಲ್ಲಿರುವ ವಸ್ತ್ರಗಳನ್ನು ತಂದು ಅರ್ಧ ಕಲ್ಪನೆ ಕಾರಳುವ ಹಾಗೆ ಪ್ರದರ್ಶಿಸಿದರೆ ಅದು ರೆಡಿಮೆಡ್ ಪ್ರಕಾರವಾಗುತ್ತದೆ. ಶಿಲ್ಪಿಗೆ ಇದು ಶಿಲ್ಪವೆಂದು ಹೇಳುವಷ್ಟು ಸಹೃದಯ ಅದನ್ನು ಶಿಲ್ಪವೆಂದು ಆಸ್ವಾಧಿಸುವಷ್ಟು ಅಂಶ ಅದರಲ್ಲಿ ಇದ್ದ ನಮ್ಮ ಶಿಲ್ಪಿಯನ್ನು ಬೆಳಕಾಗಿ ಬಂದು ಶಿಲ್ಪಗಳ ಅದೊಂದು ಶಿಲ್ಪ ಎನ್ನುವ ಅಭಿಪ್ರಾಯಗಳಲ್ಲಿ ನವ್ಯ ಶಿಲ್ಪಕಲೆಯಲ್ಲಿ ಕೆಲವೊಂದರ ವಿಧಾನಗಳನ್ನು ಗಮನಿಸಬೇಕಾಗಿದೆ.

೧. ಕಲಾಕೃತಿ ತ್ರಿಭುನಾಕೃತಿಯಲ್ಲಿದ್ದರೆ.

೨. ಕಲಾಕೃತಿಯ ನಿಜವಾದ ಸ್ಥಳಾವಕಾಶವನ್ನು (spee) ಆವರಿಸಿಕೊಂಡಿದ್ದರೆ.

೩. ಕಲಾಕೃತಿಗೆ ಸ್ಪರ್ಶಾನುಭವವಿದ್ದರೆ

೪. ಕಲಾಕೃತಿಯನ್ನು ಸುತ್ತುವರಿತು ನೋಡುವುದಕ್ಕೆ ಅವಕಾಶವಿದ್ದಾರೆ.

ಪ್ರದರ್ಶನಾಂಗಣದಲ್ಲಿ ಒಂದು ಕೃತಿಯನ್ನು ಅಂಕಣದ ಮಧ್ಯದಲ್ಲಿ ಟ್ಯಾಕೆ ಶಿಲ್ಪವೆರಿತಲೂ. ಅದೇ ಕೃತಿಯನ್ನು ನೋಡುಗ ನೇತು ಹಾಕಿದಲ್ಲ ಒಬ್ಬ ಶಿಲ್ಪಕಲೆಯವಂತಲೂ ಅಥವಾ ಪೇಂಟಿಂಗ್ ಬಂತಲ್ಲೂ ಭಾವಿಸಬಹುದು. ಉದಾಹರಣೆ:– ಪ್ರದರ್ಶಕ ಗಾಜಿನ ಮೇಲೆ ರಚಿಸಿದ ಮುಖ್ಯ ಚಿತ್ರವನ್ನು ಪ್ರದರ್ಶನಾಂಗಣದ ಮಧ್ಯದಲ್ಲಿರಿಸಿದರೆ. ಶಿಲ್ಪವೆಂತಲ್ಲೂ ಗೋಡೆಗೆ ನೇತುಹಾಕಿದರೆ ವರ್ಣಚಿತ್ರವೆಂತ ಪರಿಗಣಿಸಲಾಗಿದೆ. ಇಂದಿನ ಆಧುನಿಕ ಶಿಲ್ಪಕಲೆಯಲ್ಲಿ ಸಾಮಾನ್ಯ ವಸ್ತು ವಿಷಯವನ್ನು ಉತ್ಪ್ರೇಕ್ಷಿಸಿ ಅತಿಶಯೋಕ್ತಿಯಿಂದ ತೋರಿಸುವುದನ್ನು ಕಾಣುತ್ತೇವೆ. ಬಟ್ಟೆ ಒಣಹಾಕಲು ಉಪಯೋಗಿಸುವ ಸಣ್ಣ ಕ್ಲಿಪನ್ನು ದೊಡ್ಡ ಪ್ರಮಾಣದಲ್ಲಿ ಶಿಲ್ಪವಾಗಿ ರಚಿಸುವುದು. ಹೀಗೆ ಬಾಳೆಹಣ್ಣು ಇರುವಂತಹ ವಸ್ತು ಅಗಾಧ ಕೂಡ ಪಡೆಯೋ ಸಾಧ್ಯತೆ ಇದೆ. ಇದೊಂದು ರೀತಿಯ ಉತ್ತಮವಾದ ಶಾಕ್ ಕೊಡುವ ಯತ್ನ ಅಂದರೆ ಶಿಲ್ಪ ನೋಡಿ ಆಶ್ಚರ್ಯ ಎಂದಿರಬೇಕು. ಇದು ಸಹ ಅಭಿವ್ಯಕ್ತಿ ತಂತ್ರ ಎಂಬುದನ್ನು ಸಮಕಾಲೀನ ಶಿಲ್ಪಗಳು ವ್ಯಕ್ತಪಡಿಸಿರುವ ಪ್ರಕಾರಗಳು ಬದುಕಿ ದಿನ ನಿತ್ಯದ ಬದುಕನ್ನು ತೋರಿಸಿರುವುದೆ ಆಗಿರುತ್ತದೆ. ಆದ್ದರಿಂದ ಇತಿಹಾಸದಲ್ಲಿನ ಆದಿಮಾನವನ (ಬುಡಕಟ್ಟು ಕಲೆ tribal art) ಶಿಲ್ಪ ಕಲಾತಂತ್ರಗಳು ಮತ್ತು ಜನಪದ ಶಿಲ್ಪತಂತ್ರಗಳು ಕೂಡ ಆಧುನಿಕ ಕಲೆಯಲ್ಲಿ ಮಿಳಿತಗೊಂಡಿವೆ. ಬುಡಕಟ್ಟು ಮತ್ತು ಜನಪದ ಶಿಲ್ಪಗಳಲ್ಲಿ ಭಾವಶಕ್ತಿ ಪೂರ್ವಕ ಒತ್ತಡದ ಅಭಿವ್ಯಕ್ತಿಯಾಗಿರುತ್ತದೆ.

"ಸಮಕಾಲೀನ ಶಿಲ್ಪದಲ್ಲಿ ಮೈವಳಿಕೆಯಷ್ಟು ಬೆಳಕು ನೆರಳಿನ ವೈದಾಟವನ್ನು ಮತ್ತು ಶಿಲ್ಪವನ್ನು ಗಟ್ಟಿತನ ಭಾರತ್ವವನ್ನು ಮಾಡಿಸುವುದಕ್ಕೂ ಬಳಸಲಾಗುತ್ತದೆ. ಕೆಲವೊಮ್ಮೆ ಕಲಾವಿದ ತನ್ನ ಉಳಿಯ

ಪೆಟ್ಟು ಗುರುತುಗಳನ್ನು ಮತ್ತಿದ ರೀತಿಯನ್ನು ಹಾಗೆಯೇ ಉಳಿಸಿಕೊಳ್ಳುವುದುಂಟು ಅಲ್ಲಿ ಕಲಾವಿದ ತನ್ನ ಉಳಿಜಾರಿಸಿದ ರೀತಿ ಮೆತ್ತಿದ ರಭಸವನ್ನು ಹೇಳಿರುತ್ತಾರೆ."[೨] ಒಂದು ಬಗೆಯ ನೀತಿಯನ್ನು ಕಲಾವಿದನ ನೀತಿಯೋ ಉಲ್ಲಂಘನೆಯಿಂದ ಶಿಲ್ಪಕಲೆಗೂ ಅತ್ಯವಶ್ಯಕವಾದ ನೀತಿಯು ದಾರಿಯಾಗುವುದು. ಕಲಾವಿದನ ದೈಹಿಕ ಚಲನೆಯ ಭಾವವೇಶವನ್ನು ಮಾತ್ರವಲ್ಲದೆ ಶಿಲ್ಪಕೃತಿ ರೂಪಗೊಳ್ಳುವ ಹಂತದಲ್ಲಿ ಕಲಾವಿದನು ಅನುಭವಿಸಿದ ವಿಶೇಷ ಅನುಭವವು ಅರಿವಾಗುತ್ತದೆ ಅದರ ಜನಪದ ಶಿಲ್ಪಕಲೆಯ ಧಾರ್ಮಿಕ ಹಿನ್ನೆಲೆಯನ್ನು ಭಯ, ಭಕ್ತಿ, ಆರಾಧನೆ, ನೆನಪಿನ ಸ್ಮರಣೆಯಲ್ಲಿ ತಮ್ಮ ಸ್ಮೃತಿಗಳ ಅನುಭವದಂತೆ ಶಿಲ್ಪಗಳು ರಚನೆಗೊಳ್ಳುತ್ತವೆ. ಭಾರತದಲ್ಲಿ ಕುಶಲಕರ್ಮಿ ಮತ್ತು ಶಿಲ್ಪಕೃತಿಯನ್ನು ಅಥವಾ ಕೆಲಸವನ್ನು ತಮ್ಮ ಚಾಲಕರಿಗೆ ಸಮೀಕರಿಸಲಾಗಿತ್ತು ಭಾರತದಲ್ಲಿ ಪ್ಲಾಸಿ ಕದನ ಸೋಲಿನ ಅನಂತರ ಪ್ರತಿಯೊಬ್ಬರು ಪ್ರಬುದ್ಧ ಕೆಲಸಗಾರರನ್ನು ಕಲೋಪಾಸಕ ಕಸುಬುದಾರನಾಗಿ ತಾನು ತಯಾರಿಸಿದ ಉತ್ಪನ್ನಗಳಿಗೆ ಮೂರ್ತಿಯಂತೆ ಯಾವ ಬೆಳಕಾಗಿ ಬಂದವು ಶಿಲ್ಪಕಲೆಯು ಪ್ರತ್ಯೇಕ ರೀತಿಯಲ್ಲಿ ರೂಪ ಮತ್ತು ಮೂರ್ತಿವೆತ್ತಂತೆ ಮಾಡುವ ನೈಪುಣ್ಯದ ಅಭಿರುಚಿಯನ್ನು ಪಡೆದಿದ್ದರು. ಚಿತ್ರಕಲೆಗಳಿಗೂ ಶಿಲ್ಪಕಲೆಗಳಿಗೂ ಇರುವ ವ್ಯತ್ಯಾಸಗಳಿಂದ ಬಹಳಷ್ಟು ರೀತಿಯಲ್ಲಿ ಕಂಡುಬರುತ್ತವೆ ಆದ್ದರಿಂದ ಸಮಕಾಲೀನ ಶಿಲ್ಪಗಳು ಸಾಮಾಜಿಕವಾಗಿ ಚಿತ್ರಗಳಲ್ಲಿ ಅತಿಯಾದ ಬೆಳಕನ್ನು ನೀಡುವ ಕಲೆಗಳಾಗಿವೆ. ಚಿತ್ರಕಲೆ, ಶಿಲ್ಪಕಲೆ, ರೇಖೆಗಳು, ಪ್ರಾಣಿ-ಪಕ್ಷಿಗಳ ಚಿತ್ರ, ಮಿಥುನ ಚಿತ್ರಗಳು ಸಾಮಾಜಿಕ ಚಿತ್ರಗಳು ಶ್ರೀ ಸಾಮಾನ್ಯರಲ್ಲಿ ಪ್ರತಿಬಿಂಬಿಸುವಂತಹ ಶಿಲ್ಪಕಲೆಯು ಆಗಿದೆ.

**ಅಡಿಟಿಪ್ಪಣಿಗಳು**

೧. ಚಲುವರಾಜು, ಹಂಪಿಯ ಸ್ಮಾರಕಗಳಲ್ಲಿ ಜಾನಪದೀಯ ಅಂಶಗಳು, ೨೦೦೦, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ಪು.೨

೨. ಶರಣಬಸಪ್ಪ ಕೋಲ್ಕರ್, ಶಿಲಾಯುಗದ ಗವಿಚಿತ್ರಗಳು, ೨೦೧೦, ಬಸವ ಪ್ರಶಸ್ತಿ, ಗುಲ್ಬರ್ಗಾ, ಪು.೧೩೮

೩. ಅದೇ ಪು.೧೩೯

೪. ಅದೇ ಪು.೧೪೦

೫. ಅದೇ ಪು.೧೪೧

೬ ಅದೇ ಪು.೧೧೪೨

೭ ಅದೇ ಪು.೧೧೪೩

೮. ಅದೇ ಪು.೧೪೬

೯. ಚಲುವರಾಜು, ಹಂಪಿಯ ಸ್ಮಾರಕಗಳಲ್ಲಿ ಜಾನಪದೀಯ ಅಂಶಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦, ಪು.೩

೧೦. ಶರಣಬಸಪ್ಪ ಕೋಲ್ಕರ, ಶಿಲಾಯುಗದ ಗಪಿವರ್ಣ ಚಿತ್ರಗಳು, ಬಸವ ಪ್ರಕಾಶನ ಮತ್ತು ಪುಸ್ತಕ ವ್ಯಾಪಾರಿಗಳು ಗುಲ್ಬರ್ಗ, ೨೦೧೦, ಪು.೧೪೩.

೧೧. ಅದೇ ಪು. ೧೪೮

೧೨. ಅದೇ ಪು. ೧೪೯

೧೩. ಅದೇ ಪು. ೧೪೪

೧೪. ಶ್ರೀನಿವಾಸ ಎಲ್., ಹಂಪಿ ಪರಿಸರದ ಆದಿಮಾನವರ ನೆಲೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦, ಪು.೮೧

೧೫. ಶರಣಬಸಪ್ಪ ಕೋಲ್ಕರ, ಶಿಲಾಯುಗದ ಗವಿವರ್ಣ ಚಿತ್ರಗಳು, ಬಸವ ಪ್ರಕಾಶನ ಪುಸ್ತಕ ಗುಲಬರ್ಗ, ೨೦೧೦, ಪು.೧೪೮

೧೬. ಅದೇ ಪು.೧೫೦

೧೭. ಅದೇ ಪು.೧೪೫

೧೮. ಚಲುವರಾಜು, ಹಂಪಿಯ ಸ್ಮಾರಕಗಳಲ್ಲಿ ಜಾನಪದೀಯ ಅಂಶಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೦, ಪು.ಸ. ೫೩.

೧೯. ಆರ್. ಗೋಪಾಲ್ ಕುಲಕರ್ಣಿ, ಶ್ರೀ ಕೃಷ್ಣದೇವರಾಯರ ಜೀವನ ಮತ್ತು ಸಾದನೆಗಳು, ೨೦೦೮, ಪು. ೨೦೪.

೨೦. ಕೃಷ್ಣವೇಣಿ, ಬಳ್ಳಾರಿ ಜಿಲ್ಲೆಯ ಚಿತ್ರಕಲೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬, ಪು.ಸ. ೧೫.(ಆಪ್ರಕಟಿತ ಸಂಪ್ರಬಂಧ)

೨೧. ಶ್ರೀನಿವಾಸ ಎಲ್., ಹಂಪಿ ಪರಿಸರದ ಆದಿಮಾನವನ ನೆಲೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦, ಪು.ಸ. ೩೯.

೨೨. ನರಸಿಂಹನ್, ವಿಜಯನಗರ ಶಿಲ್ಪಕಲೆ, ಕರ್ನಾಟಕ ಲಲಿತ ಕಲಾ ಅಕಾಡೆಮಿ, ಬೆಂಗಳೂರು, ೨೦೦೪. ಪು.೧೧,

೨೩. ಶೀಲಾ ಕಾಂತಪತ್ತಾರ್, ಬಾದಾಮಿ ಚಾಲುಕ್ಯ ಶಿಲ್ಪಕಲೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೮, ಪು.೨೮.

೨೪. ನರಸಿಂಹನ್ ಅ.ಲ., ವಿಜಯನಗರ ಶಿಲ್ಪಕಲೆ, ಕರ್ನಾಟಕ ಲಲಿತ ಕಲಾ ಅಕಾಡೆಮಿ, ಬೆಂಗಳೂರು, ೨೦೦೮, ಪು.೪೭

೨೫. ಅದೇ ಪು.೪೯

೨೬. ಆದೇ ಪು.೫೦

೨೭. ಮಹದೇವ ಪಿ., ವಿಜಯನಗರದ ಗಾರೆಶಿಲ್ಪ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪, ಪು.ಸಂ.೬.

೨೮. ಶೀಲಾಕಾಂತ ಪತ್ತಾರ, ಬಾದಾಮಿ ಚಾಲುಕ್ಯರ ಶಿಲ್ಪಕಲೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೮, ಪು.ಸಂ. ೫೨.

೨೯. ಲಕ್ಷ್ಮೀಪತಿ, ದಕ್ಷಿಣ ಕರ್ನಾಟಕದ ಜನಪದ ಶಿಲ್ಪಕಲೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೯, ಪು.ಸಂ.೨೫.

೩೦. ಅದೇ ಪು.೨೦೪

೩೧. ಅದೇ ಪು.೨೦೫

೩೨. ಮಹಾದೇವ, ವಿಜಯನಗರದ ಗಾರೆಶಿಲ್ಪ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪, ಪು.ಸಂ.೧೪.

ಅಧ್ಯಾಯ : ನಾಲ್ಕು

# ಹಂಪಿ ಪರಿಸರದ ಸಾಮಾಜಿಕ ಚಿತ್ರಗಳು

೪.೧. ಬೇಟೆ

೪.೨. ಪಶುಪಾಲನೆ

೪.೩. ಕೃಷಿ

೪.೪. ಕಲೆ

೪.೫. ಪುರಾಣ

೪.೬. ಯುದ್ಧ

೪.೭. ಪ್ರಾಣಿ–ಪಕ್ಷಿಗಳು

೪.೮. ಸಸ್ಯ ಪರಿಸರ

ಅಧ್ಯಾಯ : ನಾಲ್ಕು

# ಹಂಪಿ ಪರಿಸರದ ಸಾಮಾಜಿಕ ಚಿತ್ರಗಳು

## ೪.೧. ಬೇಟೆ

ವಿಜಯನಗರ ಸಾಮ್ರಾಜ್ಯದ ಅವಧಿಯಲ್ಲಿ ಬೇಟೆ ಹೆಚ್ಚಾಗಿ ಕಂಡುಬರುತ್ತಿತ್ತು. ಕಾರಣ ಆಳರಸರು ಮತ್ತು ಜನಸಾಮಾನ್ಯರು ಬೇಟೆಯನ್ನು ಒಂದು ಪ್ರಮುಖ ವೃತ್ತಿಯಾಗಿ ಅವಲಂಬಿಸಿದ್ದರು. ಈ ಕುರಿತಂತೆ ನಮಗೆ ಅನೇಕ ಆಧಾರಗಳು ಸಿಗುತ್ತವೆ. ಅವುಗಳೆಂದರೆ ಪುರಾತತ್ವ ಆಧಾರಗಳು ಮತ್ತು ಸಾಹಿತ್ಯ ಆಧಾರಗಳು, ಪುರಾತತ್ವ ಆಧಾರಗಳಲ್ಲಿ ಶಾಸನ, ವೀರಗಲ್ಲು, ಮಹಾಸತಿಕಲ್ಲು, ನಾಣ್ಯ, ಶಿಲ್ಪ, ಚಿತ್ರಕಲೆ, ದೇವಾಲಯ ಮುಂತಾದ ಅವಶೇಷಗಳನ್ನು ಹೆಸರಿಸಬಹುದಾಗಿದೆ. ಇವುಗಳನ್ನು ವಿಜಯನಗರ ಸಾಮ್ರಾಜ್ಯದ ವ್ಯಾಪ್ತಿಯಲ್ಲಿ ನೋಡಿದರೂ ಪ್ರಮುಖವಾಗಿ ಹಂಪಿ, ಕಂಪ್ಲಿ, ಕಮಲಾಪುರ, ಮರಿಯಮ್ಮನಹಳ್ಳಿ, ಗುಡೇಕೋಟೆ, ಲೇಪಾಕ್ಷಿ ಮುಂತಾದ ಸ್ಥಳಗಳನ್ನು ಗಮನಿಸಲಾಗಿದೆ. ಸಾಹಿತ್ಯ ಆಧಾರಗಳು ಎರಡು ಬಗೆಯವು ದೇಶಿ ಮತ್ತು ವಿದೇಶಿಯ ಸಾಹಿತ್ಯ ವಿದೇಶದ ಪ್ರವಾಸಿಗರು ನೆನಪುಗಳಿದ್ದು ಬೇಟೆಯ ಉಲ್ಲೇಖಗಳನ್ನು ಗುರುತಿಸಬಹುದು. ಹಂಪಿ ವಿರೂಪಾಕ್ಷ ದೇವಾಲಯದಲ್ಲಿ ವಿಶೇಷವಾದ ಭಿತ್ತಿ ಚಿತ್ರಗಳಿವೆ. "ಮಹಾನವಮಿ ದಿಬ್ಬದ ಶಿಲ್ಪಗಳಲ್ಲಿ ಆನೆಗಳು, ಒಂಟೆ, ಕುದುರೆ, ಸೈನಿಕರು, ವ್ಯಾಪಾರಿಗಳು, ಬೇಟೆ ಮೊದಲಾದ ಉಬ್ಬು ಶಿಲ್ಪಗಳು ಕಂಡುಬರುತ್ತವೆ.

ಮುಖ್ಯವಾಗಿ "ಮಹಾನವಮಿ ದಿಬ್ಬದಲ್ಲಿ ಬೇಡ-ಬೇಡತಿಯರಿಬ್ಬರೂ ಬಿಲ್ಲು ಬಾಣಗಳಿಂದ ಬೇಟೆಯಾಡುತ್ತಿರುವ ಚಿತ್ರಗಳನ್ನು ನೋಡಬಹುದು."[೧] ಮಹಾನವಮಿ ದಿಬ್ಬದ ಮತ್ತೊಂದು ಬದಿಯಲ್ಲಿ ಮೂರು ಜನ ಬೇಟೆಗಾರರು ಬಿಲ್ಲಿಡಿದು, ಬೇಟೆ ನಾಯಿಯೊಂದಿಗೆ ಕಾಡಿನ ಪ್ರಾಣಿಗಳನ್ನು ಹಿಂಬಾಲಿಸುವ ಚಿತ್ರ ನೋಡಬಹುದು ಮತ್ತು ಹಜಾರರಾಮ ದೇವಾಲಯದ ದ್ವಾರಬಾಗಿಲು ಪಕ್ಕದಲ್ಲಿ ಹಂದಿ, ಚಿಗರೆ ಬೇಟೆ ಶಿಲ್ಪಗಳಿವೆ. ಹಾಗೇ ಕಂಪ್ಲಿಯ ಸೋಮೇಶ್ವರ ದೇವಾಸ್ಥಾನದಲ್ಲೂ ಸಹ ಬೇಟೆಯ ಉಬ್ಬು ಶಿಲ್ಪಗಳಿವೆ.

ಬೇಟೆಯು ಮಾನವನಿಗೆ ಆಹಾರ ಸಂಗ್ರಹಣೆಯ ಮೂಲಾಧಾರವಾಗಿ ಮನೋರಂಜನೆಯ ಹವ್ಯಾಸವಾಗಿ ಜನ ಜೀವನದೊಂದಿಗೆ ಬೆಳೆದು ಬಂದಿದೆ. ಜನರು ಹಸಿವನ್ನು ಹಿಂಗಿಸಿಕೊಳ್ಳಲು ಆಹಾರಕ್ಕಾಗಿ ಮೃಗಗಳನ್ನು ಬೇಟೆಯಾಡುವುದು ಅಲ್ಲದೆ ತಮ್ಮ ಉಳಿವಿಗಾಗಿ ಕ್ರೂರ ಮೃಗಗಳೊಂದಿಗೆ

ಹೋರಾಡುವುದು ಅನಿವಾರ್ಯವಾಗಿತ್ತು. ಬೇಟೆ ಆಡುವುದು ಒಂದು ವಿನೋದ. ಈ ಕಲೆಗಾರಿಕೆಗೆ ಮೃಗಾಯಾ ವಿನೋದನವೆಂದು ಕರೆಯುತ್ತಿದ್ದರಲ್ಲದೇ, ಅದು ಕ್ಷತ್ರಿಯರ ಧರ್ಮವೂ ಆಗಿತ್ತೆಂದು ಹೇಳಬಹುದು. ಕಾಡಿನಲ್ಲಿ ಮೃಗಗಳ ಹಾವಳಿ ತೀವ್ರವಾದಾಗ ಜನರು ರಾಜನ ಬಳಿ ಬಂದು ರಕ್ಷಣೆಗಾಗಿ ಬೇಟೆ ಕೋರಿದಾಗ ರಾಜ ಒಪ್ಪಿ ಅವರೊಂದಿಗೆ ಬೇಟೆಗೆ ಹೋಗುತ್ತಿದ್ದನೆಂದು ಚರಿತ್ರೆಯಿಂದ ತಿಳಿದುಬರುತ್ತದೆ.

"ವಿಜಯನಗರದ ಅರಸರು ಬೇಟೆಯಲ್ಲಿ ಪ್ರವೀಣರಾಗಿದ್ದಾರೆಂಬುದಕ್ಕೆ ಅವರಿಗಿದ್ದ ಬಿರುದುಗಳೇ ಸಾಕ್ಷಿ, ಎರಡನೆಯ ದೇವರಾಯ (ಪ್ರೌಢ ಪ್ರತಾಪ ದೇವರಾಯ) ಮಹಾರಾಜನಿಗೆ 'ಗಜ ಬೇಟೆಗಾಗಿ"[೨] ಗಜ ಬೇಟೆಗಾರ, ದೇವೇಂದ್ರ ಎಂಬ ಬಿರುದುಗಳಿದ್ದವು ೨ನೇ ದೇವರಾಯ ೧೪೩೪ರಲ್ಲಿ ಚಿತ್ರದುರ್ಗ ಜಿಲ್ಲೆ ಮೊಳಕಾಲ್ಮುರು ತಾಲ್ಲೂಕಿನ ಮಚ್ಚೇನಹಳ್ಳಿಗೆ ಬೇಟೆಗೆಂದು ಬಂದಾಗ ಜಟ್ಟಂಗಿ ರಾಮೇಶ್ವರನ ದರ್ಶನ ಮಾಡಿ ತನ್ನ ಬೇಟೆಯ ಕುರುಹಾಗಿ ೭೦ ವರಹಗಳ ಆದಾಯ ಬರುವ ಒಂದು ಭೂಮಿಯನ್ನೇ ಉಂಬಳಿಯಾಗಿಕೊಟ್ಟನು. ೧೫೦೪ ರ ಸಂದರ್ಭ ಉಮ್ಮತ್ತೂರಿನ ಮಹಾ ಮಂಡಲೇಶ್ವರ ನಂಜರಾಜ ಒಡೆಯರ್ ಗಜ ಬೇಂಟೆಗಾರ ಬಿರುದು ಪಡೆದಿದ್ದರು, ಮೈಸೂರು ಸಂಸ್ಥಾನದ ರಾಜ ಇಮ್ಮಡಿ ರಾಜ ಒಡೆಯರಿಗೆ ಆನೆ ಮತ್ತು ಜಿಂಕೆಗಳ ಕ್ರೀಡೂತ್ಸವವನ್ನು ಏರ್ಪಡಿಸಿದ್ದರು. ಅವರಿಗೆ ಗಜಾ ಮಾರ್ಗ ವಿಹಾರ ಎಂಬ ಬಿರುದಿತ್ತು. ಯಾವುದೇ ಅರಸರ ಕಾಲದಲ್ಲಿ ಸಾಮಾನ್ಯ ವ್ಯಕ್ತಿ ಗಜ ಬೇಟೆಯನ್ನಾಡಿದರೂ ಅವರಿಗೆ ಬಿರುದು ಬಹುಮಾನಗಳ ಸುರಿಮಳೆಗೈಯ್ಯುತ್ತಾರೆ. ಬೇಟೆ ಕೇವಲ ಹಸಿವಿನ ದಾಹದ ಬಯಕೆ ತೀರಿಸುವುದಾಗಿರದೇ ಲಾಭ ನಿಮ್ಮಿತ ಉದ್ಯಮವಾಗಿ ರೂಪುಗೊಂಡಿತು.

"ಹೀಗೆ ವಿಜಯನಗರ ಕಾಲದ ಅರಸರು ಮತ್ತು ಕವಿಗಳೂ ಕಾವ್ಯ ಕೃತಿಗಳನ್ನು ರಚಿಸುವಾಗ ಮೃಗಯಾ ವಿಹಾರದ ವರ್ಣನೆಯನ್ನು ಕೈ ಬಿಟ್ಟಿಲ್ಲ. ಅಷ್ಟಾದಶ ವರ್ಣನೆಯಿರುವ ಪ್ರತಿ ಕಾವ್ಯದಲ್ಲಿಯೂ ಈ ವರ್ಣನೆಯಿದೆ. ವನ್ಯ ಮತ್ತು ಕೃಷಿ ಸಂಪತ್ತು ಖಡ್ಗಮೃಗಗಳು ಇಲ್ಲಿ ಪ್ರದಾನವಾಗಿದೆ."[೩] ಬೇಟೆಯೆನ್ನುವುದು ಅರಸರಿಗೆ ಅತ್ಯಾವಶ್ಯಕವಾದ ವಿಧಾನ ಮತ್ತು ಜನರ ಜೀವನದ ಆಧಾರದ ಬೇಡಿಕೆಯಾಗಿತ್ತು. ಬೇಟೆಯಲ್ಲಿ ಆನೆಯನ್ನು ಹಿಡಿಯುವುದು ಇಂತಹ ವಿವರಗಳಲ್ಲದೇ ಬೇರೇನು ಹೇಳಿದಂತಿಲ್ಲ ಮತ್ತು ಶಾಸನಗಳಲ್ಲಿ ಕೆಲವು ರಾಜರು, ಜನಸಾಮಾನ್ಯರು ಅನೇಕ ಸಂದರ್ಭಗಳಲ್ಲಿ ನಾನಾ ಮೃಗಗಳನ್ನು ಬೇಟೆಯಾಡಿದ್ದು ಆ ನೆನಪಿಗಾಗಿ ಕೆಲವು ಉಂಬಳಿಗಳನ್ನು ಬಿಟ್ಟಿದ್ದು ಕೆಲವರು ಬೇಟೆಯಲ್ಲಿ ವಿಜಯಶಾಲಿಗಳಾಗಿದ್ದೂ ಕಂಡು ಬರುತ್ತದೆ.

ಬೇಟೆಯು ಅರಸರಿಗೆ ಮತ್ತು ಜನಸಾಮಾನ್ಯರಿಗೆ ಅತ್ಯಾವಶ್ಯಕವಾಗಿ ಬೇಕಾಗಿರುವ ಒಂದು ವೃತ್ತಿಯಾಗಿದೆ. ಇವುಗಳಿಂದ ಅನೇಕ ರೀತಿಯ ಉಳಿಕೆಗೆಬೇಕಾಗಿರುವ ಒಂದು ವಿಧಾನವಾಗಿದೆ. ಬೇಟೆಯು ಜೀವನಕ್ಕೆ ಬೇಕಾದ ಆಹಾರಕ್ಕಾಗಿ, ವಸ್ತುಗಳನ್ನು ತಯಾರಿಕೆಗಾಗಿ ಇದು ಅತ್ಯಾವಶ್ಯಕವಾದ ವೃತ್ತಿಯಾಗಿದೆ.

**ವಿಜಯನಗರದ ಬೇಟೆಯ ದೃಶ್ಯಗಳು: (ಸ್ಥಳ)**

- ವಾಸ್ತು ಶಿಲ್ಪದಲ್ಲಿ ಬೇಟೆ
- ವಿರೂಪಾಕ್ಷ ದೇವಾಲಯ
- ಹಜಾರ ರಾಮಸ್ವಾಮಿ ದೇವಾಲಯ
- ಅಚ್ಯುತ ದೇವಾಲಯ
- ವಿಜಯವಿಠ್ಠಲ ದೇವಾಲಯ
- ಮಾಲ್ಯವಂತ ರಾಘುನಾಥ ದೇವಾಲಯ
- ಮಹಾನವಮಿ ದಿಬ್ಬ

**ವಾಸ್ತು ಶಿಲ್ಪದಲ್ಲಿ ಬೇಟೆ**

"ಬೇಟೆ ಮಾನವನ ಆರಂಭಿಕ ಜೀವನದ ಮತ್ತು ಆಹಾರದ ಹುಡುಕಾಟದ ಪ್ರಥಮ ಹಂತವಾಗಿದೆ. ಈ ಹಂತದಲ್ಲಿ ತನ್ನ ಬೇಟೆಯ ಅನುಭವಗಳನ್ನು ಮಾನವನು ಗುಹೆ, ಕಲ್ಲು ಬಂಡೆಗಳ ಮೇಲೆ ಬೇಟೆಯ ಚಿತ್ರಗಳನ್ನು ಬಿಡಿಸಿದ್ದಾನೆ. ಮತ್ತು ಇವುಗಳನ್ನೆಲ್ಲಾ ಬಳಸಿದ ಆಯುಧಗಳು, ವಾಸಿಸಿದ ನೆಲೆಗಳು ವ್ಯಾಪಕವಾಗಿ ಕಂಡು ಬರುತ್ತವೆ. ಬೇಟೆಗೆ ಅನೇಕ ಕಾರಣಗಳಿವೆ."[೪] ಆಹಾರ ಸಂಪಾದನೆ, ಸ್ವಯಂ ರಕ್ಷಣೆ, ಮನೋರಂಜನೆ, ಪ್ರಕೃತಿ ಸಮತೋಲನ ಮುಂತಾದವುಗಳನ್ನು ತಿಳಿಸಬಹುದು. ಇಂದಿಗೂ ಬೇಟೆ ಲಾಭದಾಯಕ ವೃತ್ತಿಯಾಗಿದೆ. ಹಾಗೇ ಮಾನವನು ಆರ್ಥಿಕವಾಗಿ ಸದೃಡನಾದಂತೆ ಜ್ಞಾನದ ವಿಕಾಸದ ಮೇಲೆ ಪರಿಣಾಮ ಬೀರಿ ಪ್ರಾಣಿಗಳನ್ನು ಪಳಗಿಸುವ ಶಕ್ತಿ ಪಡೆದ ಈ ಬೇಟೆಯ ಶಕ್ತಿ ಅನೇಕ ಸಾಮ್ರಾಜ್ಯಗಳ ಸ್ಥಾಪನೆಗೆ ನಾಂದಿಯಾಗಿದೆ. ನಮ್ಮ ಜನಪದರು ಇತಿಹಾಸವನ್ನು ಹೇಳುವಾಗ ರಾಜ್ಯವಂಶ, ಸಾಮ್ರಾಜ್ಯಗಳು ಉದಯವಾಗುವುದು ಬೇಟೆಯಿಂದಲೇ ಎಂದು ಹೇಳುತ್ತಾರೆ.

**ವಿರೂಪಾಕ್ಷ ದೇವಾಲಯ**

ಹಂಪಿಯ ಪರಿಸರದ ಸುಂದರ ಮತ್ತು ಅತಿ ಹೆಚ್ಚು ಭಕ್ತಾದಿಗಳನ್ನು ಹೊಂದಿರುವ ದೇವಾಲಯವಾಗಿದೆ. ಮಹಾಭಾರತದ ಕಿರಾತಾರ್ಜುನರು ಬೇಟೆಗೆ ಬಲಿಯಾಗಿದ ಸತ್ತಹಂದಿಯನ್ನು ಪಡೆಯಲು ಶಿವನಿಗೂ ಮತ್ತು ಅರ್ಜುನನಿಗೂ ನಡೆಯುವ ಈ ಹೋರಾಟದ ಕಥೆ ಈ ಕಿರಾತಾರ್ಜುನಯ ಕಥಾ ಸರಣಿಯು ವಿರೂಪಾಕ್ಷ ದೇವಸ್ಥಾನದಲ್ಲಿದೆ. ಗರ್ಭ ಗೃಹದ ವಾಯುವ್ಯ ಭಾಗದ ಅರ್ಧ ಮಂಟಪ ಹಾಗೂ ರಂಗಮಂಟಪದ ಪಶ್ಚಿಮಕ್ಕೆ ಸೀಲಿಂಗ್ (ಸೂರ್ ಅಥವಾ ಒಳ ಮಾಳಿಗೆ) ನಲ್ಲಿ ಗೋಡೆಯ ಮೇಲೆ ಬೇಡ ಮತ್ತು ಬೇಡರ ಕಣ್ಣಪ್ಪನ ಬಗ್ಗೆ ಬರೆದ ಭಿತ್ತಿ ಚಿತ್ರದ ಕಲೆ ಪ್ರಸಿದ್ದವಾಗಿದೆ.

ಕಿರಾತಾರ್ಜುನ ಕಥೆಯನ್ನು ಭಿತ್ತಿಚಿತ್ರದ ಚಿತ್ರಗಳು ಲೇಪಾಕ್ಷಿಯಲ್ಲಿ ಕಂಡುಬರುತ್ತದೆ. ಆದರೆ ವಿರುಪಾಕ್ಷ ಮಂಟಪದಲ್ಲಿ ಉಬ್ಬುಚಿತ್ರ ಕಂಡುಬರುತ್ತವೆ.

ಹಂಪಿ ವಿರೂಪಾಕ್ಷೇಶ್ವರ ದೇವಾಲಯದೊಳಗಿನ ಇತಿಹಾಸವನ್ನೇ ಸೃಷ್ಟಿಸುವಂತಹ ಪೌರಾಣಿಕ ಚಿತ್ರಗಳು ಮತ್ತು ಬೇಟೆಯ ಚಿತ್ರಗಳನ್ನು ಜನಗಳ ಮನ ಸೆಳೆಯುವಂತಹ ಬೇಟೆಯ ದೃಶ್ಯಗಳನ್ನು ಕಾಣಬಹುದಾಗಿದೆ. ಹಾಗೇ ಕೃಷ್ಣದೇವರಾಯನು ೧೫೧೦ ರಲ್ಲಿ ರಂಗಮಂಟಪವನ್ನು ಕಟ್ಟಿಸುತ್ತಾನೆ. "ದಕ್ಷಿಣ ಮತ್ತು ಉತ್ತರ ದಿಕ್ಕಿನ ಪ್ರಾಚೀನ ಭಾಗದಲ್ಲಿ ಮತ್ತು ಕೃಷ್ಣದೇವರಾಯನ ೧೫೧೩ ರಲ್ಲಿ ಶಾಸನಗಳಿವೆ. ಅರ್ಧ ಮಂಟಪದ ಹೊರಗಡೆ ಶಿಂಬೀನ ವಿಧಗಳನ್ನು ಕೆತ್ತಲಾಗಿದೆ."[೫] ಬೇಟೆ ಆರಾಧನೆಯಲ್ಲಿ ಕಣ್ಣಪ್ಪನ ಶಿಲ್ಪ ಅರ್ಧ ಮಂಟಪ ಕೆತ್ತನೆಯ ಚಿತ್ರಗಳು ಕಂಬದಲ್ಲಿಯೂ ಗರ್ಭಗೃಹದ ಹೊರ ಭಾಗದ ವಾಯುವ್ಯ ದಿಕ್ಕಿಗಿರುವ ಗೋಡೆಯ ಮೇಲೆ ಉಬ್ಬು ಶಿಲ್ಪಕಲೆಯ ಚಿತ್ರಗಳೂ ಕೆತ್ತನೆಯಿಂದ ಕೂಡಿದೆ. ಒಂದು ಕಂಬದಲ್ಲಿ ಅರ್ಜುನನ್ನು ಮರದ ಕೆಳಗೆ ನಿಂತಿರುವುದನ್ನು ಶಿರಾತಿ ತನ್ನ ಪತಿಯ ಕೈಹಿಡಿದು ಬಾಣ ಬಿಲ್ಲಿನೊಂದಿಗೆ ನಿಂತಿದ್ದಾನೆ. ಶಿವ ಪಾರ್ವತಿಯರು ಕೂಡಿ ನಂದಿ ವಾಹನವೇರಿ ಹೋಗುವ ಕೀರಿಟ ಮುಕುಟವನ್ನು ಕೆತ್ತನೆಯಲ್ಲಿ ಮಾಡಲಾಗಿದೆ. ವಿಜಯನಗರ ಕಾಲದ ಕನ್ನಡ ಕವಿಗಳು ತಮ್ಮ ಕಾವ್ಯಗಳಲ್ಲಿ ಮೇಲಿನ ಸಂಗತಿಗಳನ್ನು ವರ್ಣಿಸಿದ್ದಾರೆ.

**ಹಜಾರ ರಾಮಸ್ವಾಮಿ ದೇವಾಲಯ:**

ವಿಜಯನಗರ ಕಾಲದ ಪ್ರಮುಖ ದೇವಾಲಯಗಳಲ್ಲಿ ಒಂದಾಗ ಹಜಾರ ರಾಮಸ್ವಾಮಿ ದೇವಾಲಯ. ಹೊರ ಭಾಗದ ಗೋಡೆಯ ಮೇಲೆ ಬೇಟೆಯ ಚಿತ್ರಗಳು ಹಾಗೂ ಯುದ್ದದ ಚಿತ್ರಗಳು ಮತ್ತು ಸಾಮಾಜಿಕ, ಪೌರಾಣಿಕ, ಧಾರ್ಮಿಕ ಚಿತ್ರಗಳನ್ನು ಕೆತ್ತಲಾಗಿದೆ. ಹೊರಗೋಡೆಯಲ್ಲಿನ ಇಂತಹ ಹಲವು ಚಿತ್ರಗಳಲ್ಲಿ ಬೇಟೆ ಚಿತ್ರಗಳಿವೆ.

"ಒಂದರಲ್ಲಿ ವ್ಯಕ್ತಿಗಳು ಬಲಗೈಯಲ್ಲಿ ಬಾಣವನ್ನು ಹಿಡಿದು ಬಿಲ್ಲನ್ನು ಎಡ ಹೆಗಲೇರಿಸಿ ಧನುರ್ವಿದ್ಯೆಯನ್ನು ಕರಗತ ಮಾಡಿಕೊಳ್ಳಲು ಹೊರಟಾಗ ಹೆಂಗಳೆಯರು, ಯೋಗಾಸನ ಹಾಕುವುದು. ಓಕುಳಿಯಾದಿ ವಿನೋದಗಳಲ್ಲಿ ಪಾಲುಗೊಂಡವರು ಕಂಡು ಬರುತ್ತಾರೆ."[೬] ಬಹುಶಃ ಇದು ವಿಜಯನಗರ ಕಾಲದಲ್ಲಿ ಪ್ರಚಲಿತವಿದ್ದ ವೀರಯೋಧ ಮತ್ತು ಬೇಟೆಗಾರರ ಲಕ್ಷಣವೆಂದು ಹೇಳಬಹುದಾಗಿದೆ. ಬೇಟೆಗೆ ಸಂಬಂಧಿಸಿದಂತೆ ಪುರಾಣ ಮಹಾಕಾವ್ಯಗಳಲ್ಲಿ ರಾಜ ಮಹಾರಾಜರುಗಳ ಚರಿತ್ರೆಯಲ್ಲಿ ಪ್ರಸ್ತಾಪವಾಗಿರುವುದನ್ನು ಗಮನಿಸಬಹುದು. ಹೀಗೆಯೇ ಹಜಾರ ರಾಮಸ್ವಾಮಿ ದೇವಾಲಯ ಪ್ರವೇಶದ್ವಾರದ ಎರಡು ಬದಿಗಳಲ್ಲಿ ಹಂದಿ ಮತ್ತು ಚಿಗರೆ ಬೇಟೆಯ ದೃಶ್ಯಗಳ, ಉಬ್ಬು ಶಿಲ್ಪಗಳನ್ನು ಕಾಣತ್ತೇವೆ. ಹಂದಿ ಬೇಟೆ ವಿಜಯನಗರ ಕಾಲದಲ್ಲಿ ಪ್ರಚಲಿತದಲ್ಲಿತ್ತೆಂಬುದಕ್ಕೆ ಅನೇಕ ಆಧಾರಗಳಿವೆ. ವಿಜಯನಗರದ ಅರಸರ ರಾಜಲಾಂಛನವೂ ವರಹವೇ ಆಗಿರುವುದರಿಂದ ಕ್ಷತ್ರೀಯ ಧರ್ಮಕ್ಕೆ ಹುಲುಸಾಗಿ ಈ ಹಂದಿಯ ಚಿತ್ರದ ದೃಶ್ಯವನ್ನು ಬಳಸಿರುವುದು ಕಂಡುಬರುತ್ತದೆ.

ಹಿಂದಿನ ಅರಸರು ಚಿಗರೆ ಬೇಟೆಗೆ ಹೋಗುವುದು ಪರಾಕ್ರಮ ಚಾಣಾಕ್ಷತೆಯ ಲೌಕಿಕ ಕ್ರೀಡೆಯಾಗಿತ್ತು. ಈ ಪರಿಸರದಲ್ಲಿ ಇಂದಿಗೂ ಚಿಗರೆ ಹಂದಿ ಬೇಟೆಗೆ ಹೋಗುವುದು ಅಂದಿನ ಸಾಂಸ್ಕೃತಿಕ ಪರಂಪರೆಗೆ ದ್ಯೋತಕವಾಗಿದೆ.

**ಅಚ್ಯುತ ದೇವಾಲಯ :**

ಅಚ್ಯುತ ದೇವಾಲಯದಲ್ಲಿ ಸಹ ಅನೇಕ ಸಾಮಾಜಿಕ ಸಂಸ್ಕೃತಿ ಚಿತ್ರಗಳನ್ನು ಕಾಣಬಹುದಾಗಿದೆ. ಅಂದಿನ ರಾಜಪ್ರಭುತ್ವದ ರಾಜ ರಾಣಿ, ಪರಿಚಾರಿಕಿಯರನ್ನು ಆನಂದಪಡಿಸಲು ಮತ್ತು ದಿನನಿತ್ಯದ ಜನಜೀವನವನ್ನು ಪ್ರತಿಬಿಂಬಿಸಲು ನೃತ್ಯಗಾರರು, ವಾದ್ಯಗಾರರು, ಕುಸ್ತಿಪಟುಗಳು, ಬೇಟೆಗಾರರು, ಕೊರವಂಜಿ ಮಗುವನ್ನು ಬೆನ್ನಮೇಲೆ ಒಯ್ಯುವುದು ಕೊರವಂಜಿ ಕಣಿ ಹೇಳುವುದು.

ತಿರುವೆಂಗಳನಾಥ ಅಥವಾ ಅಚ್ಯುತರಾಯ ದೇವಾಲಯದಲ್ಲಿನ ಗೋಪುರದ ಮೇಲೆ ಕಾವಲುಗಾರರ ಕಥಾ ಸಂಗತಿಗಳನ್ನು ಕೆತ್ತಲಾಗಿದೆ. ರಾಮನು ಮಾರೀಚನಿಗೆ ಬಾಣವನ್ನು ಬಿಡುವುದು, ಸೀತೆ ಅಶೋಕ ವನದಲ್ಲಿರುವುದು, ಆಂಜನೇಯ ಸೀತೆಗೆ ಮುದ್ರೆ ಬಂಗಾರವನ್ನು ಕೊಡುವುದು, ಆಂಜನೇಯನು ಸಂಜೀವಿನಿ ಪರ್ವತವನ್ನು ಎತ್ತುವುದು. ಲಕ್ಷ್ಮಣ ಮತ್ತು ಆಂಜನೇಯ ರಾಮ ನೋಡನಿರುವುದು ಮುಂತಾದವುಗಳನ್ನು ನೋಡಬಹುದಾಗಿದೆ.

**ವಿಜಯವಿಠಲ ದೇವಾಲಯ :**

ವಿಜಯನಗರ ಕಾಲದ ಆಕರ್ಷಣೀಯ ಸ್ಮಾರಕಗಳಲ್ಲಿ ಈ ದೇವಾಲಯ ಒಂದು. ವಿವಿಧ ಭಾಗಗಳಲ್ಲಿ ಬೇಟೆಗಾರ್ತಿಯನ್ನು ಚಿತ್ರಿಸುವ ವೇಷಭೂಷಣೆ ಇನ್ನೂ ರೋಚಕವಾಗಿದೆ. ವಿಜಯ ವಿಠ್ಠಲ ದೇವಾಲಯದಲ್ಲಿ ವರ್ಣಗಳಿಂದ ರಚಿತವಾದ ಕಿರೀಟವು ವಿಜಯ ವಿಠ್ಠಲ ತಲೆಯನ್ನು ಅಲಂಕರಿಸಿದೆ. ಅಲ್ಲದೆ ಅಲ್ಲಿ ಒಂದು ಮಹಿಳೆಯ ಚಿತ್ರವಿದ್ದು, ಅದರಲ್ಲಿ ಕಾಡಿನ ಹೂಗಳನ್ನು ಕಿವಿಗೆ ಸಿಂಗರಿಸಿಕೊಂಡಿರುವುದು ಕಂಡುಬರುತ್ತದೆ. ವರ್ಣಗಳನ್ನು ಜೋಡಿಸಿದ ಉಡುಗೆ ನಡುವನ್ನು ಮುಚ್ಚಿದೆ. ಉಳಿದ ಆಭರಣಗಳು ಕಾಡಿನ ಸಾಮಾಗ್ರಿಯವೇ ಆಗಿವೆ. ಬಲಗೈಯಲ್ಲಿ ಬಾಣ ಎಡಗೈಯಲ್ಲಿ ಬಿಲ್ಲನ್ನು ಎತ್ತಿ ಹಿಡಿದಿದ್ದಾಳೆ. ಹೀಗೆ ಹಲವಾರು ರೀತಿಯಲ್ಲಿ ಬೇಟೆಯ ಚಿತ್ರಗಳನ್ನು ಕಾಣಬಹುದಾಗಿದೆ. ಈ ಸಾಮ್ರಾಜ್ಯದಲ್ಲಿ ಸಂಗೀತ ಕಲಾವಿದರಿಗೆ ಮತ್ತು ನೃತ್ಯ ಕಲಾವಿದರಿಗೆ ಮಾನ್ಯತೆ ದೊರೆತಿದ್ದು ಎಂಬುದು ತಿಳಿದುಬರುತ್ತದೆ. ಅದರಿಂದಲೇ ಸಂಗೀತ ಮಂಟಪವಿದೆ.

**ಮಾಲ್ಯವಂತ ರಘುನಾಥ ಸ್ವಾಮಿ :**

ದೇವಾಲಯದಲ್ಲಿನ ರಂಗ ಮಂಟಪ ಎಡಭಾಗದ ಕಂಬದ ದಿಕ್ಕಿಗೆ ಬೇಟೆಗಾರನೊಬ್ಬ ಬಿಲ್ಲು ಬತ್ತಳಿಕೆ ಹಿಡಿದು ನಿಂತಿದ್ದಾನೆ. ಬಲ ಭಾಗದ ಕಂಬದಲ್ಲಿ ಬೇಟೆಗಾರನು ಹೆಗಲಿಗೆ ಬಿಲ್ಲನ್ನೇರಿಸಿ, ಬತ್ತಳಿಕೆ ಇನ್ನುಳಿದ ಆಯುಧ ಹಿಡಿದು ನಿಂತಿರುವ ರಾಮ ಲಕ್ಷ್ಮಣ ಚಿತ್ರ ಕಂಡುಬರುತ್ತದೆ. ಇಲ್ಲಿಗೆ

ರಾಮ ಲಕ್ಷ್ಮಣರು ಭೇಟಿ ನೀಡಿದ ಸ್ಥಳ ಎಂದು ಹೇಳುವ ಮಾಲ್ಯವಂತ ರಘುನಾಥ ಸ್ವಾಮಿ ದೇವಾಲಯದಲ್ಲಿ ಇಂಥಹ ಅನೇಕ ಬೇಟೆಯ ಚಿತ್ರಗಳು ಕಂಡುಬರುತ್ತವೆ. ಈ ಪ್ರದೇಶವು ಬೆಟ್ಟದಿಂದ ಕೂಡಿದ್ದು, ಇಲ್ಲಿ ಜನ ವಾಸಗಳ ನೆಲೆಗಳು ಮತ್ತು ಬೇಟೆಯ ಪದ್ಧತಿ ಬಗೆಗೆ ತಿಳಿಸುತ್ತಾರೆ. ಇಲ್ಲಿ ರಾಮಾಯಣದ ಕಾಲದಲ್ಲಿನ ವೈಷ್ಣವ ಪದ್ಧತಿಯನ್ನು ಕಾಣುತ್ತೇವೆ.

**ಮಹಾನವಮಿ ದಿಬ್ಬ :**

ವಿಜಯನಗರ ಕಾಲದ ದಸರಾ ಆಚರಣೆಯ ಬಹು ಮುಖ್ಯವಾದ ಸ್ಥಳವಾಗಿರುತ್ತದೆ. ಇಲ್ಲಿ ಪ್ರತಿಷ್ಠಿತ ವ್ಯಕ್ತಿಗಳದ್ದು ಅರಮನೆಗಳ ಪ್ರದೇಶದ ಕಟ್ಟಡಗಳ ಅನುಷ್ಠಾನದಲ್ಲಿ ಅಲಂಕಾರವಾದ ಪ್ರಾಣಿ ಮತ್ತು ದೃಶ್ಯ ಉಬ್ಬು ಶಿಲ್ಪಗಳಿವೆ. ಆನೆ, ಹುಲಿ, ಸಿಂಹ, ಜಿಂಕೆ, ಕುದುರೆ, ಹಂದಿ, ಜಾನುವಾರುಗಳು, ನವಿಲು, ಗಿಳಿ, ಮೀನು, ಕಪ್ಪೆ, ಮೊಸಳೆ ಇನ್ನು ಅನೇಕ ಜಲಚರ ಪ್ರಾಣಿಗಳ ಶಿಲ್ಪಗಳನ್ನು ನೋಡಲಾಗುತ್ತದೆ. ಮಹಾನವಮಿ ದಿಬ್ಬದಲ್ಲಿ ಯೋಧರು, ನೃತ್ಯಗಾರರು, ಸಂಗೀತಗಾರರು ಮತ್ತು ಬೇಟೆಗಾರರ ಚಿತ್ರಗಳು ಪ್ರಮುಖವಾಗಿ ಕಂಡುಬರುತ್ತವೆ. ಜನಸಾಮಾನ್ಯರ ಆಚರಣೆ ಬಗೆಗೆ ತಿಳಿಸಿ ಹೇಳುತ್ತವೆ.

“ಬೇಟೆನಾಯಿಗಳ ಮೂಲಕ ಬೇಟೆಯಾಡುವ ದೃಶ್ಯದ ಚಿತ್ರಗಳು, ಮಹಾನವಮಿ ದಿಬ್ಬದ ಗೋಡೆಗಳಲ್ಲಿ ಕಂಡುಬರುತ್ತವೆ. ಈ ಮಹಾನವಮಿ ದಿಬ್ಬವು ಅರಸರಿಗೆ ವಿಜಯದ ಆಚರಣೆ ಮಾಡುವ ಹಾಗೂ ಹಬ್ಬಹರಿದಿನಗಳ ಮಾಡುವ ಬಹುಮುಖ್ಯ ದಿಬ್ಬವಾಗಿದೆ.”[೧೦] ಈ ದಿಬ್ಬದ ಸುತ್ತಲಿನ ಅನೇಕ ರೀತಿಯ ಸಮಾಜಕ್ಕೆ ಒಳ್ಳೆಯ ಭಾವನೆಗಳನ್ನು ಮೂಡಿಸುವಂತಹ ರೇಖಾಚಿತ್ರಗಳು, ರಾಮಾಯಣ, ಮಹಾಭಾರತದ ಯುದ್ದದ ಚಿತ್ರಗಳು, ಬೇಟೆ ಚಿತ್ರಗಳನ್ನು, ರೇಖಾವಿನ್ಯಾಸವನ್ನು ಕಾಣುವ ಮತ್ತು ಭಾವನಾತ್ಮಕ ಚರಿತ್ರೆಯನ್ನು ಸೃಷ್ಟಿಸುವಂತಹ, ಮಹಾನವಮಿಯ ದಿಬ್ಬವಾಗಿದೆ. ಇಲ್ಲಿ ಹೆಚ್ಚಾಗಿ ಬೇಟೆ ಚಿತ್ರಗಳ ಸನ್ನಿವೇಶಗಳನ್ನು ನೋಡಲಾಗುತ್ತದೆ. ಇದರಿಂದಾಗಿ ಬೇಡ ಸಮುದಾಯವು ಇತ್ತು ಎಂಬುದು ತಿಳಿದುಬರುತ್ತದೆ. ಆನಸಾಮಾನ್ಯರ ಬನ್ನಿಹಬ್ಬ ವಿಶೇಷವಾದದ್ದು.

“ಅರಸರ ಬೇಟೆ ಬಗೆಗೆ ಶಾಸನ, ಸ್ಮಾರಕ, ಚರಿತ್ರೆಗಳು ಹುಟ್ಟಿಕೊಂಡರೆ, ಜನಸಾಮಾನ್ಯರ ಬೇಟೆಯ ಬಗೆಗೆ ವೀರಗಲ್ಲುಗಳು ಹುಟ್ಟಿ, ಮೌಖಿಕ ಕಾವ್ಯಗಳು ಉಗಮಗೊಂಡವು.”[೧೧] ಈ ವಿಜಯನಗರ ಸಾಮ್ರಾಜ್ಯದಲ್ಲಿ ಬೇಟೆಗಾರರಿಗೆ ರಾಜ್ಯ ಮನ್ನಣೆಯಿತ್ತು, ಸಂಗಮ ವಂಶದ ಅರಸ ಹರಿಹರ ಬೇಟೆಗಾರರಿಗೆ ಪ್ರೋತ್ಸಾಹ ನೀಡಿದ್ದರಿಂದ “ಈ ಸ್ಮಾರಕದಲ್ಲಿ ಒಂದು ಬೇಟೇಗಾರನ ಚಿತ್ರವಿದ್ದು ಆ ಚಿತ್ರದಲ್ಲಿ ಬೇಟೇಗಾರನ ಕೊರಳಿನಿಂದ ಎಂಥದೋ ಅಗ್ಗದ ಸರ ತೂಗೂ ಬಿದ್ದಿವೆ. ತುಂಡು ಕಚ್ಚೆಯುಟ್ಟು ಜೋಡಿನಾಯಿಯೊಂದಿಗೆ ಕಾಡಿಗೆ ಹೊರಟಿದ್ದಾನೆ.”[೧೨] ನಾಗಲೋಟದಲ್ಲಿ ಓಡುವ ಜಿಂಕೆಯನ್ನು ಕೆಡುವುದರಲ್ಲಿದ್ದಾನೆ. ಮಹಾನವಮಿ ದಿಬ್ಬದ ಎರಡು ಭಾಗಗಳು ಸುಮಾರು ಪಟ್ಟಿಕೆಯಲ್ಲಿ ಬೇಟೆ ಶಿಲ್ಪಗಳಿವೆ. ಅವುಗಳಲ್ಲಿ ಜಿಂಕೆಯ ಬೇಟೆಯ ಚಿತ್ರಗಳು ಹೆಚ್ಚಾಗಿವೆ, ಜೊತೆಗೆ ಹುಲಿಬೇಟೆ,

ಹಂದಿಬೇಟೆ ಚಿತ್ರಗಳನ್ನು ಕೆತ್ತಲಾಗಿದೆ. ಹಿಂದಿನ ಆಹಾರಕ್ಕಾಗಿ, ಬೇಟೆಗಾಗಿ ಬಳಸಿಕೊಂಡಿರುವ ಸ್ಮಾರಕಶಿಲ್ಪ, ರೇಖಾ ವಿನ್ಯಾಸ ವಿಶೇಷವಾದ ಚಿತ್ರಣವಾಗಿದೆ.

**ಹಂದಿ ಬೇಟೆ :**

"ವಿಜಯನಗರ ರಾಜಲಾಂಛನ (ಹಂದಿ) ವರಹ ಇವರು ತಮ್ಮ ಧನ ಸಂಪತ್ತಿಗೂ ವರಗಳೆಂದು ಹೆಸರಿಟ್ಟರುವರು, ಅವರು ಮುದ್ರಿಸಿದ ನಾಣ್ಯಗಳಲ್ಲಿ ವರಹದ ಚಿತ್ರ ಕಂಡು ಬರುತ್ತದೆ. ವಿಜಯನಗರವನ್ನಾಳಿದ ರಾಜವಂಶಗಳು ಶೈವ ಹಾಗೂ ವೈಷ್ಣವ ಸಂಪ್ರದಾಯಗಳೆರಡನ್ನು ಒಟ್ಟೊಟ್ಟಾಗಿ ಬೆಳೆಸುವುದರ ಮೂಲಕ ಬೆಳಕು ಕಂಡವು ಹಾಗಾಗಿ ವೈಷ್ಣವ ಸಂಪ್ರದಾಯದಲ್ಲಿ ವರಹವನ್ನು ವಿಷ್ಣುವಿನ ಅವತಾರವೆಂದು ಪೂಜಿಸುತ್ತಾರೆ."[೧೩] ಹೀಗೆ ಹಲವಾರು ವಿಜಯನಗರ ಸಾಮ್ರಾಜ್ಯದ ಸಂಪ್ರದಾಯಗಳು ಅನೇಕ ಪ್ರಾಣಿಗಳನ್ನು ಬೇಟೆಯಾಡಿ, ಜನಸಾಮಾನ್ಯರಿಗೆ ಆಹಾರ, ಜೀವನದ ವಿಷಯವಾಗಿತ್ತು. ಹಾಗೇ ತುಳು ನಾಡಿನಲ್ಲೂ ಹಂದಿವರಹವನ್ನು ವಿಷ್ಣುವಿನ ಮತ್ತು ಹಂದಿ ದೈವನಾಗಿ ಪೂಜಿಸಿಗೊಳ್ಳುತ್ತದೆ. ಹಂಪಿಯ ಪರಿಸರದ ಹಲವಾರು ದೇವಾಲಯಗಳ ಕಂಬಗಳ ಮೇಲೆ ದೇವಾಲಯದ ಗೋಡೆಗಳ ಮೇಲೆ ಸೂರ್ಯ ಚಂದ್ರಾದಿಗಳಿರುವವರೆಗೆ ಒಂದು ಹಂದಿ ಚಿತ್ರವನ್ನು ಕೆತ್ತಲಾಗಿದೆ.

ಹಂದಿಯ ಚಿತ್ರವು ವಿರೂಪಾಕ್ಷಿ ದೇವಾಲಯದಲ್ಲಿ ಗೋಪುರದೊಳಗಿನ ಕಂಬದ ಹಂಚಿನಲ್ಲಿ ಎಡಬಲಕ್ಕೆ ಹಾಗೂ ದೇವಸ್ಥಾನದ ಪ್ರದೇಶದ ದ್ವಾರದಲ್ಲಿ ಕಾಣುವುದು. ಮಲಪನಗುಡಿ ಅಚ್ಯುತರಾಯನ ಗುಡಿಗಳಲ್ಲಿ ಈ ಚಿಹ್ನೆಗಳು ಕಂಡು ಬರುತ್ತವೆ."[೧೪] ಯಾಕೆಂದರೆ ತಮ್ಮ ಕುಲ ಚಿಹ್ನೆ ನಾಶವಾಗಬಾರದು ಎಂಬುದು ಅವರ ನಂಬಿಕೆಯಾಗಿತ್ತು. ಕರಡಿ ಕುಲದವರು ಕರಡಿಯನ್ನು ಕೊಲ್ಲಬಾರದು. ಆಲದ ಮರವನ್ನು ಕಡಿಯಬಾರದೆಂಬ ನಂಬಿಕೆಗಳಿವೆ. ಇದರಲ್ಲಿ ಬೇಟೆಯು ಎರಡು ರೀತಿಯಲ್ಲಿ ಕಂಡುಬರುವುದು. ಈ ಉಬ್ಬು ಶಿಲ್ಪಗಳನ್ನು ಮಾಡಿಸಿದವರು ಜನಸಾಮಾನ್ಯರ, ಜನಪದಿಯರ ಹಾಗೇ ಬೇಟೆಯಾಡುತ್ತಿದ್ದವರು ಮತ್ತು ರಾಜನಿಗೆ ಒಪ್ಪಿತವಾದವರು ಅಥವಾ ಪ್ರಭುತ್ವಕ್ಕೆ ಜನಪದರ ಬೇಟೆಯ ಚಿತ್ರವೂ ಒಪ್ಪಿತವಾಗಿದೆ. "ಹಂಪಿಯಲ್ಲಿನ ಬೇಟೆಯ ಚಿತ್ರ ಗಮನಿಸಿದರೆ ಬೇಟೆಯ ಮಾಂಸವನ್ನು ಬೆಂಕಿಯಿಂದ ಸುಟ್ಟುಹದಗೊಳಿಸುವ ಉಬ್ಬು ಶಿಲ್ಪವೊಂದು ಮಹಾನವಮಿ ಎದುರಿನ ಬೇಟೆ ಚಿತ್ರವನ್ನು ಭೂನಾದಿಯ ಚೌಕಟ್ಟಿನ ಪಶ್ಚಿಮ ದಿಕ್ಕಿಗೆ ಕಂಡು ಬರುತ್ತಾವೆ."[೧೫] ಈ ಚಿತ್ರಗಳು ಜನಸಾಮಾನ್ಯರ ಭಾವನಾತ್ಮಕ ಕಲ್ಪನೆಗಳನ್ನು ವಿಷಯ ವಿಚಾರಗಳನ್ನು ಮತ್ತು ಜ್ಞಾನವನ್ನು ತುಲನಾತ್ಮಕವಾಗಿ ನೋಡುವುದಾದರೆ, ಇದು ಒಂದು ಸಮಾಜಕ್ಕೆ ಒಳ್ಳೆಯ ಪ್ರತಿಬಿಂಬಿಸುವಂತಹ ಪ್ರತಿಕ್ರಿಯೆಯಾದ ಚಿತ್ರಗಳಾಗಿವೆ.

**೪.೨. ಪಶುಪಾಲನೆ**

ಆದಿಮಾನವ ಆಹಾರಕ್ಕಾಗಿ ಅಲೆಯುತ್ತ ಆಹಾರ ಸಂಗ್ರಹಣೆ ಬೇಟೆಗಾರಿಕೆಯನ್ನು ಮಾಡತ್ತಿದ್ದರು ಕಾಲಾನಂತರ ಕಾಡಿನಮೃಗ ಪ್ರಾಣಿಗಳನ್ನು ಹಿಡಿದು ಆಹಾರಂಕ್ಕಾಗಿ ಸಾಕತೊಡಗಿದ್ದರು. ಹೀಗೆ ಪಶುಪಾಲನೆಗೆ ತೊಡಗಿದ ಮಾನವ ನಂತರದ ಹಂತದಲ್ಲಿ ಪಶುಪಾಲನೆಯ ಜೊತೆಗೆ ನದಿ ಅಂಚಿನಲ್ಲಿ

ಸಣ್ಣ ಕೃಷಿಗೂ ಸಹ ತೊಡಗಿದ. ಕೃಷಿಗೆ ಸಾಕುದನಗಳನ್ನು ಬಳಸಿಕೊಳ್ಳುವುದರ ಜೊತೆಗೆ ಅವುಗಳ ಗೊಬ್ಬರದಿಂದ ಉತ್ತಮ ಫಸಲು ಬೆಳೆಯ ಬಹುದು ಎಂದು ಅರಿತ. ಹೀಗೆ ದನ ಕರುಗಳ ಅಗತ್ಯ ಇದೆ ಎಂದು ಅರಿತಾಗ ಪಶುಪಾಲನೆಗೆ ಹೆಚ್ಚು ಮಹತ್ವ ತೊಡಗಿದರು. ಮತ್ತೊಂದು ರೀತಿಯಲ್ಲಿ ಸಾಮಾಜಿಕ ಜೀವನವು ಸಹ ಕಲುಷಿತವಾಗಿತೆನ್ನಬಹುದು. "ಈ ಎರಡರ ಮಧ್ಯೆ ವಿಜಯನಗರ ಅರಸರ ಕಾಲದಲ್ಲಿ ಅನೇಕ ತತ್ವಜ್ಞಾನಿಗಳು, ದಾಸರುಗಳು ತಮ್ಮ ತತ್ವ ಹಾಗೂ ದಾಸರ ಪದಗಳಿಂದ ವಿಜಯನಗರದ ಸಾಮಾಜಿಕ ಜೀವನದ ಅನಿಷ್ಠಗಳನ್ನು ಪ್ರತಿಭಟಿಸಿ, ಧರ್ಮದ ನಿಜ ಸ್ವರೂಪದ ಬೆಳಕಿನ ನೆಲೆಯು ಸಾಮಾಜಿಕ ಜೀವನವನ್ನು ಹಸನಗೊಳಿಸಬೇಕಾದರೆ ಶ್ರಮದಿಂದ, ಪಶುಪಾಲನೆ ಮತ್ತು ಕೃಷಿಯನ್ನು ನಿರಂತರದ ದಿನಗಳಲ್ಲಿ ಪಶುಪಾಲನೆಗೆ ಪ್ರಬಲವಾದ ಅಗತ್ಯಗಳನ್ನು ನೀಡಲಾಗಿತ್ತು.

"ವಿಜಯನಗರ ಅರಸರು ರಾಜ್ಯ ಆಳ್ವಿಕೆಯಲ್ಲಿ ಬೇಟೆ, ಪಶುಪಾಲನೆ ಮತ್ತು ಕೃಷಿ ವ್ಯವಸ್ಥೆಯನ್ನು ಆಗಿನ ಸಾಮ್ರಾಜ್ಯದ ಪ್ರಗತಿದಾಯಕ ಕ್ಷೇತ್ರಗಳಾಗಿದ್ದವು. ಆರ್ಥಿಕ ಉತ್ಪನ್ನ, ಅಭಿವೃದ್ಧಿ ವಿತರಣೆ ಹಾಗೂ ಅನುಭೋಗದಲ್ಲಿ ಮಹತ್ತರವಾದ ಬದಲಾವಣೆಯನ್ನುಂಟು ಮಾಡುವಲ್ಲಿ ಪಶುಪಾಲನೆಯು ಮಹತ್ವದ ಸ್ಥಾನವಾಗಿತ್ತು. ವಿಜಯನಗರ ಕಾಲದ ಪಶುಪಾಲನೆಯನ್ನು ಭಾರತೀಯ ಸಾಂಸ್ಕೃತಿಕ ಚರಿತ್ರೆಯ ಹಿನ್ನಲೆಯಲ್ಲಿ ಅವಲೋಕಿಸಬಹುದಾಗಿದೆ. ಈ ಬಗ್ಗೆ ಕೆಲವು ಆಧಾರಗಳು ಲಭ್ಯ ಈ ನೆಲದ ಪಾರಂಪರಿಕ ವೃತ್ತಿಗಳಾದ ಬೇಟೆಯ ಬಗ್ಗೆ ಸಾಕಷ್ಟು ಉಲ್ಲೇಖಗಳು ಸಿಗುವಂತೆ, ಪಶುಪಾಲನೆಗೆ ಮಹತ್ವದ ಸ್ಥಾನವಿದೆ."[೧೬] ಹೀಗೆ ಈ ಹಂತವು ಭಾರತದ ಕೃಷಿ ಪ್ರದಾನ ದೇಶ, ಪ್ರಾಚೀನ ಕಾಲದಿಂದಲೂ ಇಂದಿನವರೆಗೂ ಜನರು ಜೀವನಾವಶ್ಯಕ ವೃತ್ತಿಗಳನ್ನು ಜೀವಂತಗೊಳಿಸಿಕೊಂಡು ಬಂದಿದ್ದಾರೆ. ಶಿಲಾಯುಗದ ಮಾನವನ ಬದುಕು ಆಹಾರ ಸಂಗ್ರಹಣೆಯಿಂದ ಬೇಟೆ ಪರಿವರ್ತನೆಯಾದರೆ, ಬೇಟೆಯಿಂದ ಕ್ರಮೇಣ ಪಶುಪಾಲನೆಗೆ ನಂತರ ಕೃಷಿಗೆ ಹೀಗೆ ವಿಕಾಸ ಗೊಂಡನು, ಬಹುಶಃ ಈ ಮೊದಲ ಹಂತ ಇರಬೇಕು. ಹಂದಿ, ಜಿಂಕೆ, ಮೊಲ, ಬೆಕ್ಕು, ನಾಯಿ, ಕತ್ತೆ, ಕುದುರೆ, ಒಂಟೆಗಳನ್ನು ಅನಂತರ ಸಾಕಿರುವ ಅವಶ್ಯಕತೆಯಿದೆ. ವೇದಗಳ ಅಥವಾ ಆರ್ಯರ ಕಾಲ ಪಶುಪಾಲನೆಯು ಸುವರ್ಣಯುಗವಾಗಿತ್ತೆಂದು ವಿಜಯನಗರ ಅರಸರ ಆಡಳಿತದಲ್ಲಿ ಅವರ ಹೇಳಿಕೆಯಾಗಿತ್ತು. ಹೀಗೆ ಪಶುಪಾಲನೆ, ಬೇಟೆ ಮತ್ತು ಕೃಷಿಗಳು ಜನರ ಜೀವನಾಧಾರವಾಗಿದ್ದವು ಎಂದು ತಿಳಿದು ಬರುತ್ತದೆ. ಇದು ಇಂದಿಗೂ ಸಹ ಪ್ರಸ್ತುತವಾಗಿದೆ.

"ವಿಜಯನಗರ ಕಾಲದಲ್ಲಿ ಅರಸರು ಪಶುಪಾಲನೆಗೆ ಹೆಚ್ಚಿನ ಆಧ್ಯತೆ ನೀಡುತ್ತಿದ್ದರು. ಬೇಟೆ, ಕೃಷಿ, ಪಶುಪಾಲನೆಯಿಂದ ಜನರ ಜೀವನಕ್ಕೆ ಆಧಾರದ ಸಂಗತಿಯಾಗಿತ್ತು."[೧೭] ಆ ಕಾಲಕ್ಕೆ ದನಗಳ ಹಿಂಡು, ಗೋವುಗಳ ಸಂಪತ್ತು ಹೆಚ್ಚಿರುವವನೇ ಶ್ರೀಮಂತನಾಗಿರುತ್ತಿದ್ದ, ಅನೇಕ ರಾಜರ ಮನೆತನಗಳಲ್ಲಿ ಪಶುಪಾಲನೆಗೆ ಆಧ್ಯತೆ ನೀಡಲಾಗಿತ್ತು. ಕೆಲವೊಂದು ರಾಜರ ಮನೆತನಗಳು ಮೌರ್ಯ, ಶಾತವಾಹನರು, ಕದಂಬರು, ಗಂಗರು, ಚಾಲುಕ್ಯರು, ರಾಷ್ಟ್ರಕೂಟರು, ಹೊಯ್ಸಳರು ಹಾಗೂ ಕುಮ್ಮಟದುರ್ಗದ

ನಾಯಕ ಅರಸರ ಕಾಲದಲ್ಲಿ ಪಶುಪಾಲನೆಗೆ ಮಹತ್ವ ನೀಡಲಾಗಿದ್ದು ಹಾಗೂ ಗೋಗ್ರಹಣ ಅಥವಾ ತುರು ಕಾಳಗಳ ಉಲ್ಲೇಖಗಳು ಸಿಗುತ್ತವೆ. ಮತ್ತು ಮುಮ್ಮಡಿ ಸಿಂಗೇನಾಯಕ, ಕಂಪಿಲನಾಯಕ ಮತ್ತು ಕುಮಾರ ರಾಮನ ಕಾಲದ ಅವಧಿಯಲ್ಲಿ ನಡೆದ ಗೋಗ್ರಹಣಗಳ ಬಗ್ಗೆ ವೀರ ಶಾಸನ ಮತ್ತು ವೀರಗಲ್ಲುಗಳು ಸಾಕ್ಷೀಕರಿಸುತ್ತವೆ.

ಪಶುಪಾಲಕರು ದನಕರುಗಳನ್ನು ಸಾಕಿಕೊಂಡು ಅವುಗಳಿಂದ ಅನೇಕ ರೀತಿಯ ಉಪಯೋಗಗಳನ್ನು ಪಡೆಯುತ್ತಿದ್ದರು. ಈಗಿನ ಜನಪದರು ಸಹ ತಮ್ಮ ತಂದೆ, ತಾಯಿ, ಮಳೆರಾಜ, ಭೂಮಿ ಮತ್ತು ಸಂಪತ್ತೆಂದರೆ ಎತ್ತುಗಳೆಂದು ಭಾವಿಸಿದ್ದಾರೆ. ವೇದಗಳು ಮತ್ತು ಪುರಾಣಗಳ ಕಾಲದಲ್ಲಿ ದನ ಕರುಗಳಲ್ಲಿ ಹಸುವಿಗೆ ಬಹಳ ಪ್ರಾಮುಖ್ಯತೆಯಿತ್ತು. ಜೊತೆಗೆ ವ್ಯವಸಾಯಕ್ಕೆ ಸಹಕಾರಿಯಾಗುವ ಎತ್ತುಗಳು ಪ್ರಮುಖ ಪಡೆದವು.

ಪಶುಗಳಲ್ಲಿ ಯುದ್ಧೋಪಯೋಗಿಯಾದ ಆನೆ, ಕುದುರೆಗಳನ್ನು ಕುರಿತಂತೆ ಗಜಶಾಸ್ತ್ರ ಮತ್ತು ಅಶ್ವಶಾಸ್ತ್ರಗಳೂ ನಿರ್ಮಿತವಾಗಿವೆ. ಹಾಗೇಯೆ ಎತ್ತಗಳು, ಹಸುಗಳನ್ನು ಕುರಿತು ನಿರ್ಮಾಣವಾದಂತೆ ಕಾಣಬರುವುದಿಲ್ಲ. ಆದರೆ ಋಗ್ವೇದ, ಬೃಹತ್ ಪರಾರ ಸಂಹಿತೆ, ಕಸೂತಿಯ ಕೃಷಿ ಸೂಕ್ತಿ, ಅಗ್ನಿ ಪುರಾಣ, ಕೌಟಿಲ್ಯನ ಅರ್ಥಶಾಸ್ತ್ರ, ಹಾಗೂ ಬೌದ್ಧಾಲಯಯದ ಗ್ರಂಥಗಳು, ಹಸುಗಳ ಪಾಲನೆ ಮತ್ತು ಆರೈಕೆ, ಹೋರಿ ಮತ್ತು ಎತ್ತುಗಳ ಬಳಕೆ, ದನಗಳ ಕೊಟ್ಟಿಗೆ, ಸಗಣಿಯ ವಿಲೇವಾರಿ, ಗೋವುಗಳ ಮೇಲ್ವಿಚಾರಕರು ಆರ್ಥಿಕ ದೃಷ್ಟಿಯಿಂದ ದನಗಳ ಸಂರಕ್ಷಣೆಗೆ, ಪ್ರಿಯವಾದ ಪ್ರಾಣಿಗಳನ್ನು ಅತೀ ಹತ್ತಿರದ ನೆಲೆಯಿಂದ ನೋಡಬಹುದಾಗಿದೆ. ಪ್ರಾಣಿಗಳ ಪವಿತ್ರತೆ ಮತ್ತು ಅಪವಿತ್ರತೆ ಗೋವುಗಳ ಆರಾಧನೆ ಮತ್ತು ದನಗಳ ತಳಿ ನಿಲ್ಲಿಸುವಿಕೆ ವಿಷಯ ಕುರಿತಂತೆ ಅಮೂಲ್ಯವಾದ ವಿಷಯಗಳನ್ನು ಪ್ರತಿಪಾದಿಸಿವೆ.

**ದನಗಳ ವಿವಿಧ ತಳಿಗಳು**

**೧. ಹಳ್ಳಿಕಾರ್ ತಳಿ** "ಹಣೆಯು ಕಿರಿದಾಗಿದ್ದು ಹಿಂದಕ್ಕೆ ಬಾಚಿಕೊಂಡು ತುದಿಯು ಹರಿತವಾಗಿರುವ ಉದ್ದಿಸುವ ಕೋಡುಗಳ ತಳಿಗಳೇ ಹಳ್ಳಿಕಾರ್ ತಳಿಗಳು. ಈ ತಳಿಯ ಹೋರಿಗಳು ಉತ್ಸಾಹ ಶೀಲ ಮನೋಭಾವದವುಗಳಾಗಿದ್ದು ಕಠಿಣ ಶ್ರಮವನ್ನು ಸಹಿಸುವಂತಹವುಗಳಾಗಿವೆ."[೧೮] ಇವು ಹೊಲ ಗದ್ದೆಗಳಲ್ಲಿ ಮತ್ತು ಸರಕು ಸಾಗಾಣಿಕೆಯಲ್ಲಿ ತುಂಬಾ ಚುರುಕು ಆದರೆ ಇದೇ ತಳಿ ಹಸುಗಳು ಮಾತ್ರ ಹಾಲು ಉತ್ಪನ್ನದಲ್ಲಿ ತುಂಬಾ ದುರ್ಬಲವಾಗಿ ಕಂಡು ಬರುವವು. ಇವುಗಳು ಚಿತ್ರದುರ್ಗ ಜಿಲ್ಲೆಯ ಸುತ್ತಮುತ್ತಲಿನಲ್ಲಿ ಹೆಚ್ಚಾಗಿ ಕಂಡು ಬರುವ ವಿಶಿಷ್ಠ ತಳಿಗಳಾಗಿದ್ದವು.

**೨. ಓಂಗಳ ತಳಿ :** "ಈ ಓಂಗಳ ಜಾತಿಯ ಹಸುಗಳು ದಷ್ಟೂತಿ ಆಕಾರದವಾಗಿರುತ್ತವೆ. ಹಣೆ ಅಗಲವಾಗಿದ್ದು ಕೊಂಬುಗಳು ಸಣ್ಣದಾಗಿರುತ್ತವೆ."[೧೯] ಮೈಸೂರಿನ ಚಾಮುಂಡಿ ಬೆಟ್ಟದ ಮೇಲಿರುವ ನಂದಿ ಈ ತಳಿಯದು. ಭಾರವಾದ ಬೇಸಾಯಕ್ಕೆ ಈ ಜಾತಿಯ ಹೋರಿಗಳು ಸೂಕ್ತ. ಚುರುಕುತನ

ಕಡಿಮೆಯಾದರೂ ಶ್ರಮ, ಸಹಿಷ್ಣುಗಳು ತಳಿ ಉತ್ಪಾದನೆಗೆ ಒಳ್ಳೆಯ ಹೋರಿಗಳು. ಇಂತಹ ಹಸುಗಳು ಹೆಚ್ಚು ಪ್ರಮಾಣದ ಹಾಲು ನೀಡುತ್ತವೆ.

ಕೃಷಿ ಕ್ಷೇತ್ರದಲ್ಲಿ ಪಶುಪಾಲನೆಯು ಒಂದು ದೃಢವಾದ ಅಂಗ ಅದರಲ್ಲೂ ಗ್ರಾಮೀಣ ಆರ್ಥಿಕ ವ್ಯವಸ್ಥೆಯಾ ಪ್ರಮುಖವಾಗಿರುವ ಕೃಷಿ ಹಿಡುವಳಿಗಳು ಚಿಕ್ಕದಾಗಿರುವ ಹಳೇ ಕೃಷಿ ಕ್ರಮಗಳ ಬಳಕೆಯಲ್ಲಿರುವ ಹಿಂದುಳಿದ ಸಾಮಾಜಿಕ ವ್ಯವಸ್ಥೆಯಲ್ಲಿ ಪಶು ಸಂಗೋಪನೆ ಅಭಿವೃದ್ಧಿ ಪ್ರಮುಖ ಪಾತ್ರವನ್ನು ವಹಿಸಿದೆ. ಕೃಷಿ ಪ್ರದಾನವಾದ ನಮ್ಮಲ್ಲಿ ಪಶು ಸಂಗೋಪನೆಗೆ ಮಹತ್ವವಾದ ಪಾತ್ರವಿದೆ. ಎತ್ತು, ಎಮ್ಮೆ, ಹಸು ಇತರೆ ಪ್ರಾಣಿಗಳು ಒಂದಲ್ಲ ಒಂದು ರೀತಿಯಾಗಿ ಜನರ ಒಡನಾಡಿಗಳಾಗಿ ರೈತರಿಗೆ ವೃತ್ತಿಗಾಧಾರವಾಗಿ ಜೀವಿಸುತ್ತಿದ್ದ ಇವುಗಳ ಪಾಲನೆ ಮತ್ತು ಪೋಷಣೆ ಮನುಷ್ಯನ ಪಾಲನೆ, ಪೋಷಣೆಯಷ್ಟೆ ಮಹತ್ವವಾಗಿದೆ.

**ಎಮ್ಮೆ:**

ಹೈನುಗಾರಿಕೆಯಲ್ಲಿ ಎಮ್ಮೆಗೆ ಬಹಳ ಮುಖ್ಯಸ್ಥಾನವಿದೆ. ಹೆಚ್ಚು ಹಾಗೂ ಗಟ್ಟಿಹಾಲು ನೀಡಿ ಹೈನುಗಾರಿಕೆಗೆ ಅನುಕೂಲಕರವಾಗಿದೆ. ಇವುಗಳಲ್ಲಿ ಅನೇಕ ತಳಿಗಳಿವೆ. ಜವಾಲಿ, ಜಾಫರಾಬಾಟಿ, ಹೀಗೆ ಎಮ್ಮೆಗಳನ್ನು ವರ್ಗೀಕರಿಸಲಾಗಿದೆ. "ಈ ತಳಿ ಚಿತ್ರದುರ್ಗ ಭಾಗದಲ್ಲಿ ಬಹಳಷ್ಟು ಸಿಗುತ್ತವೆ. ಇದರಲ್ಲೇ ಆಯಾ ಭಾಗದವರು ಬೇರೆ ಬೇರೆ ಹೆಸರಿನಿಂದ ಕರೆಯಲಾಗಿದೆ."[೨೦] ಗೌಳಿಗರ ಮನೆಯಲ್ಲಿ ಇಂತಹ ಎಮ್ಮೆ ಸಾಕುತ್ತಾರೆ. ಇದರ ಸಾಕಾಣಿಕೆ ಹಣ ಗಳಿಸುವ ಸುಲಭ ಸಾಧನವಾಗಿದೆ. ಈ ಎಮ್ಮೆಗಳು ದಷ್ಟಪುಷ್ಟವಾಗಿದ್ದು, ಎತ್ತರವಾಗಿದ್ದು ಕಪ್ಪು ಬಣ್ಣ ಹೊಂದಿರುತ್ತದೆ. ಬಿಸಿಲಿನ ನಮ್ಮ ತಾಪಮಾನಕ್ಕೆ ಹೊಂದಿಕೊಳ್ಳುತ್ತವೆ. ಎಮ್ಮ ಸಾಕಾಣಿಕೆಯ ಬಹಳ ಕಷ್ಟದ ಕೆಲಸವಾದರೆ ಆದರೆ ಸುಖದ ಜೀವಕ್ಕೆ ಎಮ್ಮೆ ಹೈನುಗಾರಿಕೆ ಶ್ರೇಷ್ಠ. ಪಶುಪಾಲನೆಯ ವಿಜಯನಗರದ ನೆಲೆಯಲ್ಲಿ ಪ್ರತೀಕವಾದ ಮತ್ತು ಈ ಉದ್ಯೋಗವನ್ನು ಆಗಿನ ಅರಸರಲ್ಲಿ ಸೇವಾ ಮನೋಭಾವನೆ ಇತ್ತೆಂದು ಹೇಳಲಾಗಿದೆ. ಆದರೆ ಆಕಳು ದೇವರೆಂದು ಪೂಜಿಸುತ್ತಾರೆ. ಎಮ್ಮೆ ದೆವ್ವ ಎಂದು ಪೂಜಿಸುತ್ತಾರೆ.

**ದನಗಳ ಪೋಷಣಾ ಕ್ರಮ**

"ಸಾಮಾನ್ಯವಾಗಿ ದಕ್ಷಿಣ ಕನ್ನಡದಲ್ಲಿ ಈಗಾಗಲೇ ಪ್ರಸ್ತಾಪಿಸಿದಂತೆ ದನಗಳ ಬೆಳವಣಿಗೆಯಲ್ಲಿ ಹೆಚ್ಚಿನ ಮಹತ್ವ ವಹಿಸುವುದಿಲ್ಲ. ಅದು ಬೇಕೆಂದರಲ್ಲೂ ತಿರುಗಾಡುತ್ತಾ ಬೇಕಾದುದನ್ನು, ಬೇಡವಾದುದನ್ನು ನಿರೀಕ್ಷಿಸುವುದು ಸಾಧ್ಯವಿಲ್ಲ."[೨೧] ಪ್ರಾಣಿಗಳು ಮನುಷ್ಯನಂತೆ ಬದುಕನ್ನು ನಿರೀಕ್ಷಿಸುತ್ತವೆ. ಎನ್ನುವುದು ದಕ್ಷಿಣ ಭಾಗದಲ್ಲಿನ ಜನಸಾಮಾನ್ಯರಲ್ಲಿ ಮೂಡಿ ಬಂದ ಸಂಗತಿಗಳಾಗಿದೆ. ಸಂಶೋಧನೆಗೆ ಆರಿಸಿಕೊಂಡ ಹಳ್ಳಿಯ ದನ ಸಾಕಣೆದಾರರಾಗಲೀ ದವಸದಾನ್ಯ ಆಹಾರಗಳಷ್ಟೇ ಪ್ರಾಮುಖ್ಯತೆ ಅದರ ದೇಹದ ಸೌಖ್ಯಕ್ಕೂ ಬೇಕಾಗುತ್ತದೆನ್ನುವುದನ್ನು ಕಂಡು ಬರುವುದು ದನಗಳನ್ನು ದನಗಳ ಮೈಯನ್ನು ತೊಳೆವುದು, ದೂಳವನ್ನು ಸ್ವಚ್ಚತೆಯ ನೀರಿನಲ್ಲಿ ತೊಳೆದುಕೊಂಡು ಬರುವುದು ಹಾಗೇ ಹಗಲು ಹೊತ್ತಿನಲ್ಲಿ ತನಗೆ

ಬೇಕಾದ ಆಹಾರವನ್ನು ದನಗಳು ಹೊರಗೆ ಮೇವು ಮೇದು ಬರುತ್ತವೆ. ಆದರೆ ರಾತ್ರಿ ಹೊತ್ತಿನಲ್ಲಿ ದನಗಳು ಖಾಲಿ ಹೊಟ್ಟೆಯಲ್ಲಿರುತ್ತವೆ. ಆದುದರಿಂದ ಮಧ್ಯರಾತ್ರಿಯಲ್ಲೊಮ್ಮೆ ದನಗಳಿಗೆ ತಿನಿಸು ಕೊಡುವುದು ಬಹಳ ಮುಖ್ಯವೆಂದು ಬಲ್ಲವರು ವಿವರಣೆ ನೀಡುತ್ತಾರೆ. ವಿಜಯನಗರದ ನಂತರ ಬೇಡರಲ್ಲಿ ಎರಡು ಪಂಗಡಗಳಾಗಿ ಏರ್ಪಟ್ಟಿತ್ತು. ಊರಿನ (ಗ್ರಾಮ) ನಾಗರೀಕತೆಗೆ ಹತ್ತಿರವಾಗಿರುವವರು ಊರು ಬೇಡರಾದರೆ, ಕಾಡಿನಲ್ಲಿದ್ದು ನಾಗರೀಕತೆಯ ಸುಳಿವು ಕಾಣದವರು ಮ್ಯಾಸ ಬೇಡರೆಂದು ಕರೆಸಿಕೊಂಡರು. "ಇವರು ಬಳ್ಳಾರಿ ಮತ್ತು ಚಿತ್ರದುರ್ಗ ಜಿಲ್ಲೆಯಲ್ಲಿ ವ್ಯಾಪಕವಾಗಿ ಕಂಡು ಬರುವುದುಂಟು, ಮ್ಯಾಂಡ ಬೇಡರ, ನಾಯಕರು, ವಾಲ್ಮೀಕಿ, ತಳವಾರ, ಹೀಗೆ ಹಲವಾರು ಹಂಪಿ ಪರಿಸರದಲ್ಲಿ ಮ್ಯಾಸ ಬೇಡ(ನಾಯಕ) ರೆಂದು ಕರೆಯಲಾಗುತ್ತದೆ."[೨೨] ಕೊನೆಗೆ ಇವರು ಪ್ರಾಚೀನ ಕಾಲದಿಂದಲೂ ಶೈವ, ವೈಷ್ಣವ ಮತ್ತು ಶಾಕ್ತೀಯ ಪಂಥಗಳಲ್ಲಿ ಗುರುತಿಸಿಕೊಂಡಿರುವರು ಈ ಪರಿಸರದ ವೃತ್ತಿಯಾಗಿತ್ತು. ಪಶುಗಳ ಹಾಲು, ಸಗಣಿ, ಗೋಮೂತ್ರ, ಕೊಂಬು, ಚರ್ಮ, ಗೋರಂಜಕ ವಿಜಯನಗರ ಕಾಲದಲ್ಲಿ ಪಶುಪಾಲನೆ ಲಾಭದಾಯಕ ವೃತ್ತಿಯಾಗಿ ಮಹತ್ವ ಪಡೆದು ಆರ್ಥಿಕ ಮಟ್ಟವನ್ನು ಸುಧಾರಿಸಲು ಸಾಮಾಜಿಕ, ಧಾರ್ಮಿಕ, ಆರ್ಥಿಕ ನೆಲೆಯಲ್ಲಿ ಪಶುಪಾಲನೆ ವಿಜಯನಗರ ಕಾಲದಲ್ಲಿ ನೂರಾರು ಕೆರೆಕಟ್ಟೆಗಳು, ಬಾವಿಗಳಲ್ಲದೇ ಕೃಷ್ಣ, ಕಾವೇರಿ, ವೇದಾವತಿ, ಚಿನ್ನಹಗರಿ, ತುಂಗಾಭದ್ರ, ಗೋದಾವರಿ ಮೊದಲಾದ ನದಿ ಬಯಲುಗಳು ಪಶುಪಾಲನೆಗೆ ಹಾಸು ಹೊಕ್ಕಾದ ಪರಿಸರವನ್ನು ನಿರ್ಮಿಸಿದರು.

**ದನಗಳ ಹಬ್ಬ**

ದಕ್ಷಿಣ ಕನ್ನಡದಲ್ಲಿ ದನಗಳು ಪವಿತ್ರವಾದ ಜಾನುವಾರುಗಳಾಗಿರುವುದರಿಂದ ಅವುಗಳಿಗೆ ಯಾವತ್ತೂ ಗೌರವವನ್ನು ಕೊಡುವುದು ಪದ್ದತಿ. ಈ ಕಾರಣದಿಂದಲೇ ದನಗಳಿಗೆ ವಿಶೇಷವಾಗಿ ಪೂಜೆ- ಪುನಸ್ಕಾರಗಳ ಪದ್ದತಿಯು ನಮ್ಮಲ್ಲೂ ಕಾರಣ ದನಗಳಿಗೆ ಪೂಜೆಗೊಳ್ಳುವುದು "ದೀಪಾವಳಿಯ ಗೋಪೂಜೆ ದಿನ ಮಾತ್ರ, ಗೋಪು ಪೂಜೆಯೆಂದು ಬೆಳಗ್ಗೆ ದನಕರುಗಳನ್ನು ತೊಳೆದು, ಮೇಯಿಸಿ ಬಣ್ಣದ ಓಕುಳಿ (ಕುರ್ದಿ) ಮಾಡಿ ಅವುಗಳ ಮೇಲೆ ಸಿಂಪಡಿಸಿ ಪರಿಶುದ್ಧ ಮಾಡುತ್ತಾರೆ. ಹಾಗೇಯೇ ಕೆಂಪು, ಬಿಳಿ ಬಣ್ಣದ ನೀರು ಮಾಡಿಕೊಂಡು ಲೋಟದ ಬಾಯಿಂದ ದನಗಳ ಮೈಗೆಲ್ಲಾ ಅಚ್ಚು ಒತ್ತುತ್ತಾರೆ."[೨೩] ನಂತರದಲ್ಲಿ ಪಾರೆ ಹೂವು ಎನ್ನುವ ಹೂವನ್ನು ಮಾಲೆ ಮಾಡಿ ದನಗಳ ಕೊರಳಿಗೆ ಹಾಕುತ್ತಾರೆ. ಈ ಪಾರೆ ಹೂವಿನ ವಿಶಿಷ್ಟತೆ ಏನೆನ್ನುವುದು ಸಾಧಾರಣವಾಗಿ ಯಾರಿಗೂ ತಿಳಿದಿರುವುದಿಲ್ಲ. ಬೇರೆ ಯಾವುದೇ ಉಪಯೋಗಕ್ಕೆ ಬೀಳದ ಈ ಪಾರೆ ಹೂವನ್ನು ದನಗಳಿಗೆ ಹಾಕುವ ಔಚಿತ್ಯವೇನು ಎಂದು ನಿಗೂಢವಾಗಿದೆ. ಈ ಸನ್ನಿವೇಶವನ್ನು ಗಮನಿಸ ಬೇಕೆಂದರೆ ಕುಂದಾಪುರ ಕಡೆಯಲ್ಲಿ ಕೊಳ ಹೂವನ್ನು ಉದ್ದತೊಟ್ಟು ಕೂಡ ಕಾಯ್ದುಕೊಂಡು ತೊಟ್ಟನ್ನು ಎರಡು ಭಾಗ ಮಾಡಿ ಕುತ್ತಿಗೆಗೆ ಮಾಲೆ ಮಾಡಿ ಹಾಕುತ್ತಾರೆ. ಮದ್ಯಾಹ್ನದ ಹೊತ್ತಿಗೆ ಬೆಳಿಗ್ಗೆ ಅಕ್ಕಿಯ ನೈವೇದ್ಯಮಾಡಿ ದನಗಳಿಗೆ ತಿನಿಸುತ್ತಾರೆ."[೨೪]

"ಕಾಸರಗೋಡು ಕಡೆಯಲ್ಲಿ ಬೆಳಗಿನಿಂದ ದನಗಳಿಗೆ ತಿನಿಸನ್ನೇ ಹಾಕಿ ರಾತ್ರಿ ವಿಶಿಷ್ಟವಾದ ಪೂಜೆಯನ್ನು ಮಾಡುತ್ತಾರೆ."[೨೫] ಹೀಗೆ ಅನೇಕ ಕಡೆಗಳಲ್ಲೂ ವಿವಿಧ ರೀತಿಯಲ್ಲಿ ದನಗಳ ಹಬ್ಬಗಳನ್ನು, ಆಚರಣೆಗಳನ್ನು ಮಾಡುತ್ತಾರೆ. ಇನ್ನೊಂದು ವಿಷಯ ಹಟ್ಟಿಯ ಮುಂಬಾಗದಲ್ಲಿರುವ ದಾರಿಗಳಲ್ಲಿ ಹಣತೆಗಳನ್ನು ಹಚ್ಚಿಟ್ಟು ದೀಪಗಳ ಹಬ್ಬಗಳನ್ನು ಆಚರಿಸುತ್ತಾರೆ. ಎಲೆಯ ತುದಿಯಲ್ಲಿ ಕುಂಕುಮವನ್ನಿಟ್ಟುಕೊಂಡು ಜಾನುವಾರುಗಳಿಗೆ ಗೆರಸೆಯಲ್ಲಿಯೇ ಆರತಿಯನ್ನೆತ್ತಿ ಕುಂಕುಮವನ್ನು ಹಣೆಗಚ್ಚಿ ಗೆರಸೆಯಲ್ಲಿರುವ ತಿನ್ನಿಸುಗಳನ್ನು ದನಗಳಿಗೆ ತಿನ್ನಿಸುವುದೇ ಅವರ ಆಚರಣೆಯಾಗಿದೆ.

### ೪.೩. ಕೃಷಿ

"ಭಾರತ ಕೃಷಿ ಪ್ರದಾನವಾದ ದೇಶ. ಪ್ರಾಚೀನ ಕಾಲದಿಂದಲೇ ಕೃಷಿಯು ಭಾರತೀಯ ಪ್ರಾಥಮಿಕ ಚಟುವಟಿಕೆಯಾಗಿತ್ತು. ವೇದ ಕಾಲದಲ್ಲೆ ಭತ್ತ, ಗೋದಿ, ಬಾರ್ಲಿ, ಏಲಕ್ಕಿ, ಕೇಸರಿ, ಕರಿಮೆಣಸು ಹೀಗೆ ವಿವಿಧ ಬೆಳೆಗಳನ್ನು ಬೆಳೆಯುತ್ತಿದ್ದರು. ಹಣ್ಣು, ತರಕಾರಿಯನ್ನು ಬೆಳೆಯುವುದು ಪ್ರಮುಖ ಕೃಷಿಯ ಚಟುವಟಿಕೆಯಾಗಿತ್ತು. ವಿದ್ಯಾಭ್ಯಾಸದಲ್ಲಿ ಕೃಷಿ ಮಹತ್ವದ ವಿಷಯವಾಗಿತ್ತೆನ್ನುವುದಕ್ಕೆ ಮಹಾಭಾರತದಲ್ಲಿ ಪುರಾವೆಗಳಿವೆ. ಆಗಲೂ ಜಾನುವಾರು ಶಕ್ತಿಯನ್ನು ಬಳಸಿ ಮರದ ನೇಗಿಲಿನಿಂದ ಉಳುಮೆ ನಡೆಸಲಾಗುತ್ತಿತ್ತು."[೨೬] ಕೃಷಿ ಅಭಿವೃದ್ದಿಗೆ ನೀರಾವರಿಯ ವ್ಯವಸ್ಥೆಯ ಕುರಿತು ಆಲೋಚನೆ ನಡೆಸಲಾಗಿತ್ತು. ಬಳಕೆ ವಿದೇಶಿಯರ ಆಕ್ರಮಣದ ಭಾರತದ ಕೃಷಿ ಚಟುವಟಿಕೆಯ ಮೇಲೆ ಬಹಳಷ್ಟು ಪರಿಣಾಮವನ್ನು ಬೀರಿತು. ೧೭ ನೇ ಶತಮಾನದಿಂದೇಡೆಗೆ ತಂಬಾಕು, ಚಹಾ(೧೭೮೮), ಕಾಫಿ(೧೮೨೩), ಸೊಬು, ರಬ್ಬರ್ ಗಳಂತಹ ವಾಣಿಜ್ಯ ಬೆಳೆಗಳು ಭಾರತದ ಕೃಷಿ ಲೋಕದಲ್ಲಿ ಸೇರಿಕೊಂಡು ಪ್ರಾಮುಖ್ಯವನ್ನು ಪಡೆಯಲಾರಂಬಿಸಿದವು. ವಿದೇಶದಿಂದ ಅನೇಕ ಹಣ್ಣು ತರಕಾರಿಗಳ ತಳಿಗಳು ನಮ್ಮ ದೇಶಕ್ಕೆ ಬಂದವು.

ಸ್ವತಂತ್ರ ಸಿಕ್ಕ ಸಮಯದಲ್ಲಿ ಕೃಷಿ ಅಭಿವೃದ್ದಿಯ ಅಗತ್ಯ ಪ್ರಥಮ ಆಧ್ಯತೆಯಲ್ಲಿತ್ತು. ಈಗಲೂ ಕೃಷಿ ರಂಗದ ಅಭಿವೃದ್ದಿಯು ಗ್ರಾಮೀಣ ಪುನರ್ ನಿರ್ಮಾಣದ ಪ್ರಮುಖ ಅಂಶವಾಗಿದೆ. ೬೦ರ ದಶಕದ ಮಧ್ಯಾವಧಿಯಲ್ಲಿ ಹಸಿರು ಕ್ರಾಂತಿಯಿಂದ ಪ್ರಾರಂಭವಾಗಿ, ಹೊಸ ಕೃಷಿ ತಂತ್ರಗಾರಿಕೆಯನ್ನು, ವಿವಿಧ ಕೃಷಿ ವಾತಾವರಣಕ್ಕೆ ಬೆಳಗೆ ಮತ್ತು ನೀರಾವರಿ ಅನುಕೂಲಕ್ಕೆ ತಕ್ಕಂತೆ ಅಳವಡಿಸಲಾಯಿತು. ಆದರೆ ಕೃಷಿ ಅಭಿವೃದ್ದಿಗೆ ಇವುಗಳ ಕೊಡುಗೆ ವಿವಿಧ ಪ್ರದೇಶಗಳಲ್ಲಿ ಮತ್ತು ಬೆಳೆಗಳಲ್ಲಿ ವ್ಯತ್ಯಾಸವಾಗಿತ್ತು, ಈಶಾನ್ಯ ವಲಯದಲ್ಲಿ ತಂತ್ರಗಾರಿಕೆ ಯಶಸ್ವಿಯಾಗಿದ್ದರೆ ಹೀಗೆ ಭತ್ತದ ಬೆಳೆಯಲ್ಲಿ ಪ್ರಗತಿ ಕಡಿಮೆ ಪೂರ್ವ ಪ್ರಾಂತ್ಯದಲ್ಲಿ ಈ ನಿಟ್ಟಿನಲ್ಲಿ ಹೆಚ್ಚು ಪ್ರಗತಿಯನ್ನು ಸಾಧಿಸಲಾಗಲಿಲ್ಲ. ಮತ್ತು ಇದರಿಂದ ಶ್ರೀಮಂತರ ವರ್ಗದವರು, ಬಡವರ್ಗದವರನ್ನು ಹೆಚ್ಚಾಗಿ ಕೂಲಿ ಕೆಲಸಕ್ಕೆ ಬಳಸಿಕೊಂಡು ಕಡಿಮೆ ಪ್ರಮಾಣದಲ್ಲಿ ಕೂಲಿಯನ್ನು ನೀಡುತ್ತಿದ್ದರು.

ಹೀಗೆ ವಿಜಯನಗರ ಕಾಲದಲ್ಲಿ ಸ್ಥಿರವಾದ ಕೃಷಿಯನ್ನೇ ಅವಲಂಬಿತವಾದ ಹಾಗೂ ಭೂಮಿಯನ್ನು ಬೇಸಾಯ ಮಾಡಿ ಆಹಾರವನ್ನು ಬೆಳೆದು, ಸರ್ಕಾರಕ್ಕೆ ಕಾಲಕಾಲಕ್ಕೆ ತೆರಿಗೆಯನ್ನು ಪಾವತಿಸುವ, ವಿಧಾನವಾಗಿತ್ತು. ವಿಜಯನಗರ ಸಾಮ್ರಾಜ್ಯದ ಆಡಳಿತದ ಸೂಚನೆಗಳಾಗಿದ್ದವು. ಅಲ್ಲಿನ ಜನಸಾಮಾನ್ಯರು ಬೇಟೆ, ಪಶುಪಾಲನೆಯ ಜೊತೆ ಜೊತೆಗೆ ಕೃಷಿಯ ಬೆಳವಣಿಗೆಯಾಯಿತು. ಹೆಚ್ಚಾಗಿ ವಿಜಯನಗರ ಆಡಳಿತದಲ್ಲಿ ಕುರುಮ (ಕುಮ್ರಿ), ಬೇಸಾಯ ಎಂಬ ಕೃಷಿ ವಿಧಾನವನ್ನು ಆರಂಭದಿಂದ ಮಾನವ ರೂಢಿಸಿಕೊಂಡಿದ್ದನು. "ಒಮ್ಮೆ ಕೃಷಿಗೆ ಬಳಸಿದ ಭೂಮಿಯನ್ನು ಕೆಲವು ವರ್ಷಗಳ ಕಾಲ ಉಳುಮೆ ಮಾಡದೇ ಹಾಗೆಯೇ ಬಿಡುತ್ತಿದ್ದರು. ಇದರಿಂದ ಫಲವತ್ತತೆ ವೃದ್ಧಿಯಾಗುತ್ತಿತ್ತು. ಇದನ್ನು ಸ್ಥಳ ಬದಲಾಯಿಸುವ ಬೇಸಾಯ ಕ್ರಮವೆಂತಲೂ ಕರೆಯಬಹುದಾಗಿದೆ."[೨೭] ಏಕೆಂದರೆ ಆಗಿನ ವಿಜಯನಗರ ಸಾಮ್ರಾಜ್ಯದ ಪ್ರತೀಕ ನಡವಳಿಕೆಯು ಅತೀ ಕಾರಣದಿಂದ ಬೇಸಾಯವನ್ನು ಬೆಳೆಯುತ್ತಿದ್ದರು. ಅವರು ಕುಮ್ರಿ ಬೇಸಾಯವನ್ನು ಬೆಳೆಯುವ ಪದ್ದತಿಯ ವಿಧಾನವನ್ನು ಕಂಡುಕೊಂಡಿದ್ದರು. ಕುಮ್ರಿ ಬೇಸಾಯ ಪದ್ಧತಿಯೆಂದರೆ, ಸ್ಥಳಾಂತರದ ಮತ್ತು ಒಣ ಬೇಸಾಯ ಪದ್ಧತಿಯನ್ನು ಬೆಳೆಯುತ್ತಿದ್ದರು. ಕುಮ್ರಿ ಬೇಸಾಯವನ್ನು ಯಾವುದೇ ಕಾರಣದಿಂದ, ಕೃಷಿ ಬೆಳೆಯಲು ನಷ್ಟವನ್ನುಂಟು ಮಾಡುತ್ತಿರಲಿಲ್ಲ. ಇದು ಕರ್ನಾಟಕದ ಮಟ್ಟಿಗೆ ನೋಡುವುದಾದರೆ ದಕ್ಷಿಣ ಮತ್ತು ಉತ್ತರ ಕನ್ನಡ ಜಿಲ್ಲೆಗಳಲ್ಲಿ ಹಾಗೂ ಕರ್ನಾಟಕದ ಮಲೆನಾಡು ಸೀಮೆಯಲ್ಲಿ ಈ ಬಗೆಯ ಬೇಸಾಯವು ಅಲ್ಲಿ ಜಾರಿಯಲ್ಲಿದ್ದ ಬಗ್ಗೆ ಶಾಸನಗಳು ಉಲ್ಲೇಖಿಸುತ್ತವೆ.

"ಕೃಷಿಯ ಬಗ್ಗೆ ಸಾಕಷ್ಟು ತಿಳುವಳಿಕೆ ಜನರಿಗೆ ಆ ಕಾಲಕ್ಕಾಗಲೇ ತಿಳಿದಿತ್ತು. ಮಣ್ಣು, ನೀರು, ಬೆಳಕು, ಗಾಳಿ ಹೀಗೆ ಸ್ವಾಭಾವಿಕವಾಗಿ ಸಸ್ಯವರ್ಗ, ಖನಿಜ ಸಂಪತ್ತುಗಳನ್ನು ಉಪಯೋಗಿಸಿಕೊಳ್ಳುವ ಜಾಣ್ಮೆಯಿಂದ ತಲೆಮಾರಿನವರೆಗೆ ಕರಗತವಾಗಿತ್ತು."[೨೮] ಭಾರತದ ವಿವಿಧ ರೀತಿಯ ರಾಜ್ಯಗಳಲ್ಲಿರುವ ಬೇಸಾಯ ಪದ್ಧತಿಗಳನ್ನೇ ವಿಜಯನಗರದವರು ರೂಢಿಸಿಕೊಂಡಿದ್ದರೂ ಆದರೆ ನೀರಾವರಿ ಬೇಸಾಯಕ್ಕೆ ಹೆಚ್ಚಿನ ಆದ್ಯತೆ ನೀಡಿದ್ದು ಉತ್ತರ ಭಾಗದಲ್ಲಿ ಒಣಬೇಸಾಯ ಮತ್ತು ನೀರಾವರಿಗಳಿಗೆ ಸಮವಾಗಿ ಆದ್ಯತೆಕೊಟ್ಟಿದ್ದರು.

"ಬೇಸಾಯವನ್ನು ಈಗಿನಂತೆ ಹಿಂದೆಯೆ ಕೃಷಿಯು ಎರಡು ಕಾಲಾವಧಿಗಳನ್ನು ಹೊಂದಿತ್ತು. ಅಂದರೆ ಜೂನ್‌ನಿಂದ ಅಕ್ಟೋಬರ್, ಫೆಬ್ರುವರಿ, ಜನವರಿ, ಮೇ ತಿಂಗಳವರೆಗೆ ಮುಂಗಾರು, ಹಿಂಗಾರ ಬೆಳೆಗಳನ್ನು ಬೆಳೆಯಲಾಗಿತ್ತು."[೨೯] ಕೃಷಿ ಭೂಮಿ ಅನೇಕ ವಿಧದಲ್ಲಿ ಪ್ರಗತಿ ಮತ್ತು ಚಾಲ್ತಿಯಲ್ಲಿತ್ತು. ಕಣಿವೆ ಕೆಳಭಾಗದಲ್ಲಿ ನದಿ ಮತ್ತು ನಲ್ಲಿಗಳಿಂದ ನೀರನ್ನು ಪಡೆಯುವ ಜಮೀನುಗಳಿಗೆ ಬೈಲುಭೂಮಿ ಎಂದು, ಅವರ ಬೈಲಿಗಿಂತ ಎತ್ತರವಾಗಿರುವುದಕ್ಕೆ ಮೆಜೋ ಎಂದಿದ್ದಾರೆ. ವಿಜಯನಗರದ ಕೃಷಿ ಬೆಳೆ ಬೆಳೆಯುವ ನೆಲೆಗಳೆಂದರೆ, ಬೆಟ್ಟ, ಹುಲ್ಲುಗಾವಲು, ನದಿ ಬಯಲು ಜೋಗು ಪ್ರದೇಶದಲ್ಲಿ ಮತ್ತು ಇತರೆ ಭಾಗಗಳಲ್ಲಿ ಶುಂಠಿ, ಏಲಕ್ಕಿ, ಮೆಣಸು, ವಿಳ್ಯದೆಲೆ, ಅಡಿಕೆ ಬೆಳೆಯನ್ನು ಬೆಳೆಯುತ್ತಿದ್ದರು. ಪಶ್ಚಿಮ

ಕರಾವಳಿ ಮಲೆನಾಡುಗಳಲ್ಲಿ ಹೆಚ್ಚಾಗಿ ಈ ಬೆಳೆಗಳನ್ನು ಬೆಳೆಯುತ್ತಿದ್ದರು ಹಾಗೂ ಒಣಬೇಸಾಯ(Dry land)ವನ್ನು ಮಳೆಗಾಲದಲ್ಲಿ ಮಾತ್ರ ಉಳುಮೆ ಮಾಡುತ್ತಿದ್ದರು. ಮಳೆಗಾಲದ ಈ ಬೇಸಾಯಕ್ಕೆ ಇದನ್ನು ಕಾರುಭೂಮಿ ಎನ್ನುವರು. ಭೂಮಿಯನ್ನು ಉತ್ತಮ, ಮಧ್ಯಮ ಮತ್ತು ಅಧಮ ಎಂದು ವರ್ಗೀಕರಿಸುವುದು ಅವರ ವೈಜ್ಞಾನಿಕ ಬೇಸಾಯಕ್ಕೆ ಕಾರಣಗಳಾಗಿವೆ.

"ಈಗಿನ ವೈಜ್ಞಾನಿಕ ಬೀಜ, ಗೊಬ್ಬರಗಳ ಬಳಕೆ ಅಂದು ಇತ್ತೊ ಅಥವಾ ಇಲ್ಲವೋ ತಿಳಿಯದು ಆದರೆ ಮಳೆನಕ್ಷತ್ರ, ತಿಥಿ, ಭವಿಷ್ಯನೋಡುವ ಪದ್ದತಿ ಇತ್ತು ಮಡಿಕೆ, ಕುಂಟೆ, ಕೂರಿಗೆಗಳಿಗೆ ಪೂಜಿಸುವ ರೂಢಿಯಿತ್ತು."[೨೦] ಈ ಉಪಕರಣಗಳನ್ನು ಕಟ್ಟಿಗೆಯಿಂದ ಮಾಡುತ್ತಿದ್ದರು. ಉಳುವ ಭೂಮಿಗಾಗಿ, ಎತ್ತುಗಳ ಮೂಲಕ ಬೇಸಾಯ ಮಾಡುತ್ತಿದ್ದರು. ರೈತರು ಎತ್ತುಗಳಿಗೆ ಬಸವಣ್ಣವೆಂದು ಪೂಜ್ಯನೀಯ ಸ್ಥಾನಕೊಟ್ಟು ಸೋಮವಾರ ದಿವಸದಿಂದ ಕೃಷಿ ಚಟುವಟಿಕೆಗಳಿಗೆ ಕೆಲವು ಸಮಯಗಳಿಗೆ ಬಳಸಿಕೊಳ್ಳುತ್ತಿದ್ದರು. ಈ ಪದ್ದತಿಯು ವಿಜಯನಗರಕ್ಕೆ ಬೇಟಿ ನೀಡಿದ ಯಾತ್ರಿಕರು ಇಲ್ಲಿನ ಕೃಷಿ ಚಟುವಟಿಕೆಗಳ ಬಗ್ಗೆ ವಿಷಯ ತಿಳಿಯಲು ಬೇಕಾದ ಕೃಷಿಯ ಬಳಕೆಗೆ ನೇಗಿಲು(ನ್ನು) ಉಳುಮೆ ಮಾಡಲು ಕೋಣಗಳನ್ನು, ಎತ್ತುಗಳನ್ನು ಬಳಸುತ್ತಿದ್ದರು.

"ಡೊಮಂಗೋ ಪೆಯಸ್ (೧೫೨೦-೨೨)ನು ವಿಜಯ ನಗರಕ್ಕೆ ಬೇಟಿಕೊಟ್ಟಾಗ ಗೋದಿ, ಹತ್ತಿ, ಭತ್ತ, ಹುರುಳಿ, ಮತ್ತಿತರ ದಾನ್ಯ ಎಣ್ಣೆ ಬೀಜಗಳ ಬಗ್ಗೆ ಉಪಯೋಗದ ಬಗ್ಗೆ ತಿಳಿಸಿದ್ದಾರೆ. ಹಂಪಿ ಅನುವಾಸಿನಲ್ಲಿ ಭತ್ತ, ಕಿತ್ತಳೆ, ನಿಂಬೆ, ಸಿಬೆಹಣ್ಣು ಕೆಂಪು, ಮೂಲಂಗಿ ಮತ್ತು ಎಲೆಕೋಸು ಮೊದಲಾದವುಗಳನ್ನು ಬೆಳೆಯುತ್ತಿದ್ದ ಬಗ್ಗೆ ತಿಳಿಸಲಾಗಿದೆ."[೨೧]

ಫರ್ನಾವೋ ನ್ಯೂನಿಜ್ ವಿಜಯನಗರಕ್ಕೆ ಬೇಟೆ ಕೊಟ್ಟಾಗ ಗೋದಿ,ಕಾಳು, ಭತ್ತ, ಜೋಳ, ವಿಳ್ಯದೆಲೆ, ಅಡಿಕೆ ಬೆಳೆಗಳನ್ನು ಬೆಳೆಯುತ್ತಿದ್ದ ಬಗ್ಗೆ ವಿವರಿಸಿದ್ದಾನೆ. ಇದೇ ರೀತಿ ಅಬ್ದುಲ್ ರಜಾಕನು ಕಂಡ ದೃಶ್ಯ ಹಾಗೂ ಕೃಷಿ ದಾನ್ಯಗಳ ಬಗ್ಗೆ ವಿವರಿಸಿದ್ದಾನೆ. ಆದರೆ ಇಂಡಿಯಾದಂತೆ ಅರಾಭಿಕ್ ಮತ್ತು ಅರ್ಮಜ್‌ಗಳಲ್ಲಿ ಕೂಡ ಬೆಳೆದ ಬೆಳೆಗಳ ಬಗ್ಗೆ ತಿಳಿಸಿದ್ದಾನೆ. ಮತ್ತು ರಷ್ಯಾದ ಯಾತ್ರಿಕ ನಿಕಟನ್ ಬೀದರ್ ಭಾಗದ ಗೋದಿ, ಅಕ್ಕಿ, ದ್ವಿದಳ ದಾನ್ಯಗಳು, ಆಹಾರ ದಾನ್ಯಗಳ ಬಗ್ಗೆ ವಿಷಯ ತಿಳಿಸಿದ್ದಾನೆ.

**ಕೃಷಿಯಲ್ಲಿನ ಜಾತಿಗಳು**

"ವಿಜಯನಗರ ಸಾಮ್ರಾಜ್ಯದಲ್ಲಿನ ಶಾಸನಗಳು ಸಹ ಕೃಷಿಯಲ್ಲಿ ಕಂಡು ಬರುವಂತೆ, ಶೂದ್ರರು, ಗೌಡರು ಅಥವಾ ಒಕ್ಕಲಿಗರು, ಹೊಲೆಯರು, ಮಾದಿಗರು, ಮೇಲು ಮತ್ತು ಕೆಳಜಾತಿಗಳೆಂಬ ಉಪವಿಧಾನಗಳು ಹಲವಿದ್ದವು ಇವರೆಲ್ಲರ ಪ್ರಧಾನ ವೃತ್ತಿಯೇ ಕೃಷಿಯಾಗಿದ್ದಿತು."[೨೨] ಒಕ್ಕಲಿಗರು ಅಥವಾ ಗೌಡರು ನೆಲವನ್ನು ಉಳುಮೆ ಮಾಡಿಸುವವರಾಗಿದ್ದರು ಅಂದಿನ ಕೃಷಿಯು ಇವರ ಆರ್ಥಿಕ ವ್ಯವಸ್ಥೆಯ ಮೇಲೆ ನಿಂತಿತ್ತೆಂದು ಹೇಳಬಹುದು. ಹೊಲೆಯರು ಕೃಷಿ ಕಾರ್ಮಿಕರಲ್ಲಿ ಪ್ರಮುಖರಾಗಿದ್ದು ಇದರ ಹುಟ್ಟು ಸಾವುಗಳೆರಡೂ ಮಣ್ಣಿನೊಂದಿಗೆ ನಿಕಟ ಸಂಪರ್ಕ ಹೊಂದಿತ್ತು.

## ಭೂಕಂದಾಯ

"ವಿಜಯನಗರ ಸಾಮ್ರಾಜ್ಯದ ಭೂಕಂದಾಯ ವ್ಯವಸ್ಥೆಯಲ್ಲಿ ಎರಡು ರೀತಿಯ ಪದ್ದತಿಗಳಿದ್ದವು. ಈ ಕಂದಾಯ ನಿಗದಿ, ಆ ಕಂದಾಯ ವಸೂಲಿ ಭೂಕಂದಾಯ ನಿಗದಿಯ ಯಾವುದೇ ಪದ್ಧತಿಯಲ್ಲಿ ಮೊದಲನೆಯ ಪದ್ದತಿಯನ್ನು ಅಥವಾ ರೀತಿಯ ತತ್ವಗಳನ್ನು ಕೃಷಿಕನು ಕೊಡಬೇಕಿದ್ದ ತೆರಿಗೆಯನ್ನು ಮುಖ್ಯವಾಗಿ ಮಣ್ಣಿನ ವರ್ಗ ಮತ್ತು ಬೇಸಾಯದ ಪರಿಸ್ಥಿತಿಗಳನ್ನು ಆಧಾರವಾಗಿಟ್ಟುಕೊಂಡು ನಿರ್ಧರಿಸಲಾಗುತ್ತಿತ್ತು."[೩೩] ಇದಕ್ಕಾಗಿಯೇ ಬೇಸಾಯದ ಭೂಮಿಯನ್ನು ೪ ಭಾಗಗಳಾಗಿ ವಿಂಗಡಿಸಬಹುದಾಗಿದೆ.

೧. ಕಡಾರಂಬ (ಒಣ ಬೇಸಾಯ)

೨. ನೀರಾರಂಬ (ಗದ್ದೆ ಬೇಸಾಯ)

೩. ತೋಟಾರಂಬ (ತೋಟದ ಬೇಸಾಯ)

೪. ಕುಮರಿ (ಕುಮ್ರಿ) (ಸ್ಥಳವನ್ನು ವರ್ಗಾಯಿಸುವ ಬೇಸಾಯ)

ಹೀಗೆಯೇ ಶಾಸನಗಳಲ್ಲಿ ಇವುಗಳನ್ನು ಬೇರೆ ಬೇರೆಯಾಗಿ ಉಲ್ಲೇಖಿಸಿರುವುದರಿಂದ ಅವುಗಳ ಬೇರೆ ಬೇರೆ ಧರಗಳಲ್ಲಿ ಕಂದಾಯ ನಿಗದಿ ಮಾಡಲಾಗುತ್ತಿತ್ತೆಂದು ಕಂಡು ಬರುತ್ತದೆ. ರೈತರು ಉತ್ಪಾದಿಸುವ ೧/೬ ರಷ್ಟು ಭಾಗವನ್ನು ತೆರಿಗೆಯಾಗಿ ಕೊಡಬೇಕಾಗಿತ್ತು. ವಿದೇಶಿಯವರು ತಮ್ಮ ಬರವಣಿಗೆಯಲ್ಲಿ ಹೇಳಿರುವ ವರ್ಣನೆಯು ವಿಜಯನಗರದಲ್ಲಿ ಇದ್ದದ್ದೇ ಆಗಿದ್ದರೆ ಮೇಲಿನ ತೆರಿಗೆಯ ಪ್ರಮಾಣವು ಸುಳ್ಳೆಂದು ಹೇಳಬಹುದು. ತೆರಿಗೆಯನ್ನು ಧರ 'ಸುಂಕಣಿ' ಎಂದು ಕರೆಯಲಾಗುತ್ತಿತ್ತು.

ಗ್ರಾಮದ ರೈತರು ಮತ್ತು ಇತರೆ ನಿವಾಸಿಗಳು ತಮ್ಮ ಮನೆಗಳ ಮೇಲೆ ತೆರಿಗೆ ಕೊಡಬೇಕಾಗಿತ್ತು, ಅದನ್ನು ಹೂದಕೆ ಅಥವಾ ಹೊದಿಸಿದ ಬಿದರ ಮತ್ತು ಮಹದೇವನ ಎಂದು ಎಂದು ಬೇರೆ ಬೇರೆ ಹೆಸರುಗಳಿಂದ ಕರೆಯುತ್ತಿದ್ದರು. ಅಂದಿನ ಕಾಲದ ರೈತರು ಜಾವನಾಡಿಯೇ ಆಗಿದ್ದ ನೇಗಿಲು, ಎತ್ತುಗಳು, ಬಂಡಿಗಳು, ಬಿತ್ತನೆ, ಬೀಜಗಳೆಲ್ಲವೂ ತೆರಿಗೆಯಿಂದ ಮುಕ್ತನಾಗಿರುತ್ತಿರಲಿಲ್ಲ. ದನಗಳು ಮೇಯಿಸುವ ಹುಲ್ಲುಗಾವಲು ಪ್ರದೇಶಕ್ಕೆ ತೆರಿಗೆ ಕೊಡಬೇಕಾಗಿತ್ತೆಂದು ಇವುಗಳ ಆಧಾರಗಳಿಂದ ವಿಷಯಗಳು ತಿಳಿದು ಬರುತ್ತಿದ್ದವು. "ವಿಜಯನಗರ ಸಾಮ್ರಾಜ್ಯದ ಆಡಳಿತದ ಕಾಲಾವಧಿಯಲ್ಲಿ ರೈತರಿಗೆ ಬೇಕಾಗಿರುವ ತೂಕ ಮತ್ತು ಅಳತೆಯನ್ನು, ಬೆಳೆಗಳನ್ನು ಬೆಳೆದ ಮೇಲೆ ಫಸಲನ್ನು ಅಳತೆ ಮಾಡುವುದು ಒಂದು ಪ್ರಮುಖವಾದ ಕೆಲಸವೇ ಈ ಇಳುವರಿಯ ಆಧಾರದ ಮೇಲೆಯೂ ಭೂಮಿಯ ಫಲವತ್ತತೆಯನ್ನು ಈ ವಿಧಾನದಿಂದ ಗುರುತಿಸಲಾಗುತ್ತಿತ್ತು. ವಿಜಯನಗರದ ಬೆಳವಣಿಗೆಗೆ ಅನೇಕ ರೀತಿಯ ಜೀವನಾಧಿಕಾರಿಗಳೆ ಬೇಕಾಗುವ"[೩೪] ಬಟ್ಟೆ, ರೈತರಿಗೆ ಬೇಕಾಗುವ ಉಪಕರಣಗಳು ಮತ್ತು ಕೈಗಾರಿಕೆ ಉದ್ದಿಮೆ, ವಿಜಯನಗರದ ಸಾಮ್ರಾಜ್ಯದ ನಾಣ್ಯಗಳ ವ್ಯವಸ್ಥೆ, ಲೋಹ ವಸ್ತುಗಳ

ಕುಶಲ ಕೈಗಾರಿಕೆ, ಕಬ್ಬಿಣ ಮತ್ತು ಉಕ್ಕು ಕೈಗಾರಿಕೆ, ಕೃಷಿಗೆ ಸಂಬಂಧಿಸಿದ ಕಬ್ಬು ಮತ್ತು ಬೆಲ್ಲ ತಯಾರಿಕೆ, ಮರಕೆಲಸಗಳ ತಯಾರಿಕೆ, ಎಣ್ಣೆ ತಯಾರಿಕೆ ಮತ್ತು ಮಡಿಕೆ ತಯಾರಿಕೆ ಇವೆಲ್ಲವೂಗಳೂ ವಿಜಯನಗರ ಸಾಮ್ರಾಜ್ಯದ ಅನೇಕ ಕೃಷಿಕರಿಗೆ ಅತ್ಯಾವಶ್ಯಕ ವಸ್ತುಗಳಾಗಿದ್ದವು. ಮತ್ತು ವಿಜಯನಗರ ಕಾಲದಲ್ಲಿ ಕುಂಬಾರರು ಪ್ರಮುಖರಾಗಿದ್ದರು. ಹೀಗೆ ಸಾಮ್ರಾಜ್ಯದಲ್ಲಿ ಬಂದುದ್ದನ್ನು ಒಂದರ್ಥದಲ್ಲಿ ಹಿತವೆನ್ನಬಹುದಾಗಿದೆ.

### ೪.೪. ಕಲೆ

ಪ್ರಾಚೀನ ಕಾಲದಿಂದಲೂ ಕರ್ನಾಟಕವು ವಿಭಿನ್ನ ಭಾಷೆ, ಸಂಸ್ಕೃತಿ, ಕಲೆಗಳ ತವರೂರಾಗಿ ಬೆಳೆದುಕೊಂಡು ಬಂದಿದೆ. ಮಾನವನ ವಿಕಾಸನದ ಹಲವು ಮಜಲುಗಳನ್ನು ಕಂಡಿರುವ ಕರ್ನಾಟಕವು ಐತಿಹಾಸಿಕವಾಗಿ, ಸಾಂಸ್ಕೃತಿಕವಾಗಿ, ಧರ್ಮ, ಪರಂಪರೆ ಹಾಗೂ ಲಲಿತ ಕಲೆಗಳಿಂದ ಕೂಡಿದೆ. ಹಲವಾರು ಕಲಾವಿದರ ಹುಟ್ಟಿಗೆ ಕಾರಣವಾಗಿದೆ. ಈ ಸಾಂಸ್ಕೃತೀಕ ಇತಿಹಾಸದ ವಿವಿಧ ಪುಟಗಳಲ್ಲಿ ನಾನಾ ಕಾರಣಗಳಿಗಾಗಿ ಹುಟ್ಟಿಕೊಂಡ ಕಲೆಗಳು, ಕರ್ನಾಟಕದ ವೈವಿಧ್ಯಮಯ ಭೌಗೋಳಿಕತೆಯ ಹಿನ್ನಲೆಯಲ್ಲಿ ವಿಭಿನ್ನ ರೂಪಗಳನ್ನು ಪಡೆದಿದ್ದೂ ಆಯಾ ಪ್ರದೇಶದ ಜನಸಮುದಾಯದ ಆಶೋತ್ತರಗಳನ್ನು ಅವು ಬಿಂಬಿಸುತ್ತಿವೆ. ಕರ್ನಾಟಕದ ಕಲೆಗಳ ಮಟ್ಟಿಗೆ ಮಾತನಾಡುವಾಗ ಅದು ಒಂದು ಪ್ರಮುಖ ಚಿತ್ರಕಲೆಯನ್ನು ಸಹ ನಿರ್ಲಕ್ಷಿಸುವಂತಿಲ್ಲ. ಈ ಕಲೆಗೆ ಅದರದೇ ಆದ ಶ್ರೀಮಂತಿಕೆಯಾಗಿದೆ.

"ಕರ್ನಾಟಕದಲ್ಲಿನ ಚಿತ್ರಕಲೆಯು ಸಾವಿರಾರು ವರ್ಷಗಳ ಹಿಂದೆಯೇ ಜನ್ಮ ತಾಳಿದೆ. ಶಿಲಾಯುಗದಿಂದ ಹಿಡಿದು ಇಂದಿನವರೆಗೆ ಆದಿವಾಸಿಗಳು, ಬುಡಕಟ್ಟು ಜನರು, ಅಲೆಮಾರಿಜನಗಳು, ಆದಿಮಾನವರ ರೇಖಾಚಿತ್ರಗಳು ಹಾಗೂ ಚಿತ್ರಕಲೆಯ ಮೂಲಕ ತಮ್ಮ ಬದುಕನ್ನು ತೆರೆದಿಟ್ಟುಕೊಂಡು ಬಂದಿದ್ದಾರೆ."[೩೫] ಉದಾಹರಣೆಗೆ ಇಂದಿಗೂ ಕರ್ನಾಟಕದ ಅನೇಕ ಪ್ರದೇಶಗಳ ಬುಡಕಟ್ಟು ಮನೆಗಳಲ್ಲಿ ಹಾಗೂ ಗುಹಾಲಯದ ಚಿತ್ರಗಳಲ್ಲಿ ಕಾಣಬಹುದಾಗಿದೆ. ಹೀಗೆ ಜನಪದ ಸಾಹಿತ್ಯ ಸಂಸ್ಕೃತಿಯು ಪರಂಪರೆಯ ಚಿತ್ರಕಲೆಯ ಬೆಳವಣಿಗೆಯಂತೆ ಐತಿಹಾಸಿಕ ಪರಂಪರೆಯ ಚಿತ್ರಕಲೆ ಅಜಂತಾ, ಎಲ್ಲೋರ, ಬಾದಾಮಿ, ಲೇಪಾಕ್ಷಿ, ಹಂಪೆ ಹೀಗೆ ನೂರಾರು ಕಡೆಗೆ ದೇವಾಲಯ, ಮನೆ, ಅರಮನೆ, ಮಠ, ಮಸೀದಿ, ಚರ್ಚ್‌ಗಳಲ್ಲಿ ಇಂದಿಗೂ ಉಳಿದುಕೊಂಡು ಬಂದುದನ್ನು ನೋಡಬಹುದಾಗಿದೆ. ಹಾಗಾಗಿ ಚಿತ್ರಕಲೆಯ ಮೂಲಕ ಕರ್ನಾಟಕದ ಸಾಂಸ್ಕೃತಿಕ ಲೋಕ ತುಂಬಾ ಶ್ರೀಮಂತವಾಗಿ ಅನಾವರಣಗೊಂಡಿದೆ. ನಮ್ಮ ನಾಡಿನ ಸಾಂಸ್ಕೃತಿಕ ಪರಂಪರೆಯ ಇತಿಹಾಸವನ್ನು ಗಮನಿಸಿದಾಗ, ನಮ್ಮ ಚಿತ್ರಕಲೆಯ ಇತಿಹಾಸ ನಿಜಕ್ಕೂ ಅನನ್ಯವಾದುದಾಗಿದೆ. ಇದ್ದರೂ ಇಂತಹ ಚಿತ್ರಕಲೆಯ ನಿರ್ಮಾತೃಗಳು, ಕಲಾಸೃಷ್ಟಿಕಾರರು ಎಲೆಮರೆಯ ಕಾಯಿಯಂತೆ ಮರೆಯಾಗಿಯೇ ಉಳಿದಿದ್ದಾರೆ.

ಹಾಗೆಯೇ ಜನಪದವು ಇಂದು ನಾವು ಬಳಸುತ್ತಿರುವ ಅರ್ಥದಲ್ಲಿ ತನ್ನಿಂದ ತಾನೇ ಮೂಡಿ ಬಂದುದಲ್ಲ ಆದಿವಾಸಿ, ಬುಡಕಟ್ಟು ಸಮುದಾಯಗಳ, ಅಲೆಮಾರಿ ಹೀಗೆ ಮನುಷ್ಯ ಒಂದು ಕಡೆ ನೆಲೆ

ನಿಂತು, ಸಾಂಘೀಕ ಸಾಮಾಜಿಕ ಜೀವನವನ್ನು ಆರಂಭಿಸಿದ ನಂತರ ಅವರೆಲ್ಲರ ನಡುವಳಿಕೆಗಳಲ್ಲಿನ ಸಮಾನ ಅಂಶಗಳ ನಿಧಾನಕ್ಕೆ ರೂಪುಗೊಳ್ಳುತ್ತಾ ವಿಧಿವಿಧಾನಗಳಾದವು. ಈ ವಿಧಿವಿಧಾನಗಳು ಬರುಬರುತ್ತಾ ಅವರ ಸಾಮಾಜಿಕ ಜೀವನದ ಪ್ರತಿಯೊಂದು ಹಂತದಲ್ಲಿಯೂ ಪ್ರಭಾವ ಬೀರುತ್ತಾ ತಮ್ಮ ಹಿಡಿತವನ್ನು ಬಿಗಿಗೊಳಿಸುತ್ತಾ ಬಂದು ನಿಧಾನವಾಗಿ ಸಂಸ್ಕೃತಿಯಾಗಿ ಮಾರ್ಪಟ್ಟವು. ಈ ಸಂಸ್ಕೃತಿಯೆಂಬುದು ಕಣ್ಣಿಗೆ ಕಾಣದೆ ಕೇವಲ ಆಚರಣೆಗಳಲ್ಲಿ ಮಾತ್ರ ಮನಸ್ಸಿಗೆ ಗೋಚರವಾಗುವ ಕಲ್ಪನೆಯಾಯಿತು. ಇಂತಹ ಸಂಸ್ಕೃತಿಗಳು ಎಲ್ಲೆಲ್ಲಿ ಜನಪದದ ಮಾನವ ಜನಾಂಗಗಳನ್ನು ಒಟ್ಟೊಟ್ಟಿಗೆ ವಾಸಮಾಡಲು ಆರಂಭಿಸಿದವೋ ಅಲ್ಲೆಲ್ಲ ಬೇರೆ ಬೇರೆಯಾಗಿ ಪ್ರಾದೇಶಿಕ ಖಿನ್ನತೆಯನ್ನು ಪಡೆದುಕೊಳ್ಳಲಾರಂಭಿಸಿದವು. ಕಾಲಕಳೆದಂತೆ ಬುದ್ದಿ ಚುರುಕಾಗುತ್ತಾ ಬಂದಂತೆ, ನೆಲದ ಮೋಹ ಬೆಳೆಯುತ್ತಾ ಬಂದಂತೆ, ಸಂಸ್ಕೃತಿ ನಾಗರೀಕತೆಯಾಗಿ ವಿಕಾಸಗೊಳ್ಳತೊಡಗಿತು. ಹೀಗೆ ನಾಗರೀಕತೆಗಳು ಬೆಳೆದಂತೆ ಕಲೆಗಳು ವೈವಿಧ್ಯಮಯವಾಗಿ ಬೆಳೆಯುತ್ತಾ ಬಂದಿವೆ. ಜನಪದಗಳು ಸಾಮಾಜಿಕ ಜೀವನದಲ್ಲಿ ಹೆಚ್ಚಾಗಿ ಡೊಳ್ಳು ಕುಣಿತ, ಕೋಲಾಟದ ಕುಣಿತ, ಭಜನೆಯ ಹಾಡು, ಸೋಬಾನದ ಹಾಡು, ಸಾಹಿತ್ಯ ಮದುವೆ ಆಚರಣೆಯ ಹಾಡು, ಚಿತ್ರಗಳ ಕಲಾಮೇಳಾ, ಸ್ಥಬ್ದ ಚಿತ್ರದ ಮೆರವಣಿಗೆ ಹೀಗೆ ಅನೇಕ ಜನಪದರಲ್ಲಿ ಕಾಣುವ ದೃಶ್ಯಗಳಾಗಿವೆ. ಜನಪದವು ಅಧ್ಯಯನದಿಂದ ನಮ್ಮ ದೇಶೀಯ ಸಂಸ್ಕೃತಿಯ ಅಜ್ಞಾನತಲೋಕವೊಂದರ ಪರಿಚಯವಾಗುತ್ತದೆ. ಇದರಿಂದ ಜನಪದ ಸಂಸ್ಕೃತಿ, ಸಮಾಜ ಮತ್ತು ಕಲೆಗಳಿಗಿರುವ ಸಂಬಂಧವನ್ನು ತಿಳಿದುಕೊಳ್ಳಲು ಸಾಧ್ಯವಾಗುತ್ತದೆ. ಇಲ್ಲಿ ಜನಪದ ಲಲಿತಾ ಕಲೆಗಳಲ್ಲಿ ಪ್ರಮುಖವಾದ ಚಿತ್ರಕಲೆಗಳನ್ನು ಸ್ಥೂಲವಾಗಿ ಕರ್ನಾಟಕದ ಹಿನ್ನೆಯಲ್ಲಿ ವಿವೇಚಿಸಲಾಗಿದೆ. ಜನಪದ ಚಿತ್ರಕಲೆಯ ಮುಖ್ಯ ಲಕ್ಷಣಗಳು ಸಾಂಪ್ರದಾಯಿಕ ನಂಬಿಕೆ, ಧರ್ಮದ ಮೂಲಗಳೇ ಜನಪದ ಚಿತ್ರಕಲೆಗಳು ಸಮಾಜದ ಒಂದು ಉತ್ತಮ ಕಲೆಯಾಗಿದೆ.

**ಕಲೆ**

ಕಲೆಯೆಂಬ ಶಬ್ದವನ್ನು ಹೆಚ್ಚು ನಿಖರವಾಗಿತಿಳಿಯಲು ನಾವು ಸೌಂದರ್ಯ ಎಂಬ ಇನ್ನೊಂದು ಶಬ್ದ ಅರ್ಥವನ್ನು ಗಮನಿಸಬೇಕು. ವ್ಯವಹಾರ ಮಾತಿನಲ್ಲೇ ಸುಂದರ ಎಂಬ ಮಾತನ್ನು ಅಡ್ಡಾದಿಡ್ಡಿಯಾಗಿ ಬಳಸುತ್ತೇನೆ. ಗುಲಾಬಿ ಸುಂದರ ಹೂವು, ಸಂಗೀತ ಇಂಪಾಗಿತ್ತು, ಸೂರ್ಯಸ್ತ ಸುಂದರವಾಗಿದೆ, ಕಲಾವಿದನಭಾವನಾತ್ಮಕ ಕಲ್ಪನೆಯನ್ನು ರೇಖೆಗಳ ಬಳಕೆಯಿಂದ, ಬಣ್ಣಗಳ ರಚನೆಯಿಂದ, ದೃಶ್ಯಗಳ ನಡುವಿನ ಸಂಭಂದವೇ ಒಂದು ಸುಂದರವಾದ ಕಲೆಯೆನ್ನಬಹುದು.

**ಕಲೆ ಮತ್ತು ಪ್ರಕೃತಿ**

"ಕಲೆಯ ನಿರ್ಧಿಷ್ಟ ಅರ್ಥವನ್ನು ಮಾಡಿಕೊಳ್ಳ ಬೇಕಾದರೆ, ಪ್ರಕೃತಿಯು ಕಲಾತ್ಮಕವಾಗಿಯೂ, ಸುಂದರ ವಾಗಿಲ್ಲವೇಂಬ ಪ್ರಶ್ನೆಯನ್ನಾಕಬೇಕು. ಭಾರತೀಯ ಪರಂಪರೆಯ ಅನುಭವಿಯನ್ನು ಬಿಟ್ಟ ಸಾಮಾಜಿಕ ಜೀವನದ ಇತರ ಅಂಶಗಳನ್ನು ಪ್ರಕೃತಿಯೆನಿಸಿಕೊಳ್ಳುತ್ತದೆ."[೩೬] ಹಲವಾರು ಕಲೆಯಲ್ಲಿ ನಾವು ಕಾಣಬಹುದಾದ ವಿಧಾನಗಳು ಚಿತ್ರಕಲೆ, ಸಂಗೀತ, ಸಾಹಿತ್ಯ, ಜನಪದ, ನಾಟಕ, ಸಿನಿಮಾ,

ಆಟದ ದೃಶ್ಯ(ಕ್ರೀಡೆ), ಮಾತನಾಡುವ ರೀತಿಯಲ್ಲಿ ಒಂದು, ಬರವಣಿಗೆಯಲ್ಲಿ ಒಂದು, ಪಂದ್ಯಗಳಲ್ಲಿ ಗೆಲ್ಲುವುದೇ ಒಂದು, ವಿಶಾಲವಾದ ರೇಖಾಗಳನ್ನು ಎಳೆಯುವುದರ ಮೂಲಕ ಒಂದು ಕಲೆ, ನಡೆಯುವುದೊಂದು ಕಲೆ, ಕುಳಿತುಕೊಳ್ಳುವುದೊಂದು ಕಲೆ, ಧಾರ್ಮಿಕ ಆಚರಣೆ ಮಾಡುವುದೊಂದು ಕಲೆ, ಹಾಡು ಗಾರಿಕೆಯಲ್ಲಿ ಒಂದು ಕಲೆ, ನೃತ್ಯದಲ್ಲಿ ಒಂದು ಕಲೆ, ಹೀಗೆ ಅನೇಕ ರೀತಿಯ ಕಲೆಯಲ್ಲಿ ಕಂಡ ಒಂದು ಸಂಗತಿಗಳಾಗಿದ್ದು ಕಲಾವಿದನಿಗೆ ಬೆಳೆಯಲಿಕ್ಕೆ ಬೆಳಸಲಿಕ್ಕೆ ಕಲೆಯು ಒಂದು ಅದ್ಭುತ ನೆಲೆಯಾಗುವುದು.

"ಅನಾದಿಕಾಲದಿಂದಲೂ ಭಾವಾಭಿವ್ಯಕ್ತಿಯು ಮಾನವನ ಸಹಜಗುಣ. ಕಲೆಯು ಮನುಷ್ಯನ ವರ್ಗದಷ್ಟೇ ಪ್ರಾಚೀನವಾದುದು, ಗವಿ ಮಾನವನು ಎಲುಬಿನ ತುಂಡುಗಳ ಗೋಡೆಗಳ ಗೀಚುತ್ತಿದ್ದ. ಇದು ಸು. ೫೦ ಸಾವಿರ ವರ್ಷಗಳ ಹಿಂದಿನ ಕಥೆ, ಅನಂತರ ಬಣ್ಣಗಳಿಂದ ಗೋಡೆಯ ಮೇಲೆ ಚಿತ್ರಬಿಡಿಸ ತೊಡಗಿದ. ಇದು ಇತಿಹಾಸ ಪೂರ್ವ ಕಥೆಯು ಸಹ ಹೇಳಬಹುದಾಗಿದೆ. ಚಿತ್ರಕಲೆಯು ಆಯಾ ಕಾಲದ, ದೇಶದ, ಮಾನ ಧರ್ಮಗಳನ್ನು ರೇಖೆ ಚಿತ್ರ ವರ್ಣಗಳಿಂದ ಪ್ರತಿಬಿಂಬಿಸುತ್ತದೆ."[೩೭]

ಆದಿ ಮಾನವನ ಗುಹೆಯಲ್ಲಿ ಆರಂಭಗೊಂಡ ಕಲೆಯು ಹುಟ್ಟು ಪ್ರಾರ್ಥನಾಲಯಗಳ ಗೋಡೆಗಳ ಮೇಲೆ, ದೇವರ ಅಪಾರ ಶಕ್ತಿಯನ್ನು, ಮತ ಧರ್ಮಗಳ ಸಾರವನ್ನು, ಸಂತರ ಮಹಿಮೆಯನ್ನು ವಿವರಿಸುತ್ತಾ ಬೆಳೆಯಿತು. ಬಳಕೆ ದೊರೆಗಳ ವೈಭವವನ್ನು ಮೆರೆಯಿಸಿತ್ತು, ಇವೆಲ್ಲವೂ ರೋಚಕ ವಿಚಾರಗಳು, ಕಲೆಗಳಿಲ್ಲದ ದೇಶವಿಲ್ಲ,ಕಲೆಗಳಿಲ್ಲದ ಕಾಲವಿಲ್ಲ. ಬೇರೆ ಬೇರೆ ಕಾಲ ದೇಶಗಳ ಚಿತ್ರಗಳ ವಿಷಯಗಳು ಮತ್ತು ಶೈಲಿಗಳ ಬೇರೆ ಬೇರೆಯಾಗಿವೆ.

ಮಾನವನ ಬದುಕನಲ್ಲಿ ಕಲೆಯು ಹಾಸುಹೊಕ್ಕಾಗಿ ಬೆಳೆದು ಬಂದಿದೆ. ಈಗಿನ ಚಿತ್ರದಲ್ಲಿ ಅಭಿರುಚಿ ತೋರಿಸುವವರ ಹಾಗೂ ಚಿತ್ರ ರಚಿಸುವವರ ಸಂಖ್ಯೆಯು ಹೆಚ್ಚಾಗಿದೆ. ಕಲೆಗೆ ನಿಜವಾಗಿ ಸಂವೇಧಿಸಿ ಆನಂದ ಪಡೆಯ ಬೇಕಾದರೆ ದೇಶ ವಿದೇಶಗಳ ತರತರಹದ ಇತಿಹಾಸದ ಕಲೆಗಳಲ್ಲಿ ಅರಿವು ಅಗತ್ಯ. ಅದರ ಕುರಿತು ಹೆಚ್ಚಿನ ಜ್ಞಾನವೂ ಕಲಾ ವ್ಯಸನಿಗಳಿಗೂ, ವಿಶೇಷ ಕಲಾಗಾರರಿಗೂ ಅವಶ್ಯಕವಾಗಿದೆ. ಆದರೆ ಸಂಕ್ಷಿಪ್ತ ಸಾಮಾನ್ಯ ತಿಳುವಳಿಕೆಯು ಮಾತ್ರ ಸಮಸ್ತ ಪ್ರೇಕ್ಷಕರಿಗೂ ಬೇಕಾದುದು ಅಂಥವರಿಗಾಗಿ ಈ ಸಂಶೋಧನಾ ಪ್ರಬಂಧದಲ್ಲಿ ಬರೆಯಲಾಗಿದೆ. ಶಾಲೆಗಳಲ್ಲಿ ಹಲವು ವಿಷಯಗಳು ಕಲಿಯಲ್ಪಡುತ್ತವೆ. ಅವುಗಳೊಟ್ಟಿಗೆ ಕಲೆಯು ಇತಿಹಾಸದ ಈ ಪ್ರಾಥಮಿಕ ಜ್ಞಾನವನ್ನು ನೀಡುವುದು ಒಂದು ಮಹತ್ವದಾಗಿದೆ.

**ವಿಜಯನಗರ ಕಾಲದ ರೇಖಾ ಚಿತ್ರದ ಕಲೆ**

"ಜನಸಮುದಾಯದ ಸಮಗ್ರ ಜೀವನವನ್ನು ಕುರಿತು ಮತ್ತು ಜನ ಜೀವನದ ಎಲ್ಲಾ ಕ್ಷೇತ್ರಗಳಿಗೆ ಸಂಭಂದಪಟ್ಟ ಸ್ಮರಣಾರ್ಥದ ಸಂಗತಿಗಳು ವೈಜ್ಞಾನಿಕವಾದ ಹಾಗೂ ಅಧಿಕೃತವಾದ ನಿರೂಪಣೆ ಸಾಂಸ್ಕೃತಿಕ ಚರಿತ್ರೆಯಲ್ಲಿ ಪ್ರಮುಖವಾಗುತ್ತದೆ."[೩೮] ಚಿತ್ರಕಲೆಯಲ್ಲಿ ಸಾಮಾಜಿಕವಾದ ಒಂದು ಅದ್ಭುತವಾದ

ಬೆಳೆದಿರುವುದು ಉಲ್ಲೇಖವಾಗಿ ಕಲೆಯಿಂದ ಜನಜೀವನದ ಬದುಕಿನ ರೀತಿ, ಅವರ ನಡೆನುಡಿ, ಸಂಪ್ರದಾಯ, ಆಚಾರ, ವಿಚಾರ, ಮತ, ಧರ್ಮ, ಬೆಳಗಿಸಿದ ಕಲೆ, ಸಾಹಿತ್ಯ, ಆರ್ಥಿಕ ವ್ಯವಸ್ಥೆ ಮುಂತಾದ ಸಕಲ ವ್ಯವಹಾರಗಳನ್ನು ಒಳಗೊಂಡಿರ ಬೇಕಾಗುತ್ತದೆ. ಮುಖ್ಯವಾಗಿ ಜನರು ಎತ್ತಿ ಹಿಡಿದ ಜೀವನ ಮೌಲ್ಯಗಳನ್ನು ಪ್ರತಿಬಿಂಬಿಸಬೇಕು. ಅವನು ಪ್ರಾಕೃತ ಮಟ್ಟದಿಂದ ಸಾಂಸ್ಕೃತಿಕ ಮಟ್ಟವನ್ನು ಏರುತ್ತಾ ಪ್ರಗತಿ ಪರವಾದ ಬಗೆಯನ್ನು ನಿರೂಪಿಸುವಂತಿರಬೇಕು. ದೇಶದ ಸಕಲ ಸಂಪತ್ತು, ವ್ಯಾಪಾರ, ವ್ಯವಹಾರ, ವಿದ್ಯೆ, ಕಲಾಕುಶಲತೆ, ವಿಜ್ಞಾನಾಭಿವೃದ್ಧಿ, ಮತಾಚಾರ, ಧರ್ಮ, ಸ್ವತಃ ಯಂತ್ರ ಪರಿಶ್ರಮ ಸಂಸ್ಕೃತಿ ಪ್ರಚಾರ, ತತ್ವಶೋಧನೆ ಇವೆಲ್ಲವೂ ಜನಜೀವನದ ಮುಖ್ಯ ಲಕ್ಷಣವಾಗಿದ್ದರಿಂದ ಮತ್ತು ಚರಿತ್ರೆಯ ನಿರ್ಮಾಣಕ್ಕೆ ಅಗತ್ಯವಾದ ಸಾಮಾಗ್ರಿಗಳೆಂದು ಸಹಜವಾಗಿಯೇ ಪರಿಗಣಿತವಾಗಿದೆ. ಒಂದು ದೇಶದಲ್ಲಿನ ಕಾಲಾಘಟ್ಟದ ಚರಿತ್ರೆ ಸಮಗ್ರ ಜೀವನದ ಪ್ರತಿಬಿಂಬ ಎಂಬುದನ್ನು ಒಪ್ಪಿಕೊಂಡಲ್ಲಿ ಕಲೆಯು ಮಾನವರಲ್ಲಿ ಅತಿಯಾಗಿ ಬಳಕೆಗೆ ಅವಶ್ಯಕವಾಗಿದೆ. ಸಾಮಾಜಿಕ ಜೀವನವು ಕಲೆಗಳಿಂದ ಕ್ರಿಯೆಗಳನ್ನು ಮಾಡಿ ಆರ್ಥಿಕತೆಯನ್ನು ಹೆಚ್ಚಿಸಿಕೊಳ್ಳಬಹುದಾಗಿದೆ. ದಿನನಿತ್ಯದ ಜೀವನಾರ್ಥದ ಕ್ರಿಯೆಗಳೆಂದರೆ ಕಲೆ, ರೇಖಾ ಚಿತ್ರಕಲೆ, ಸಂಗೀತ, ನಾಟಕ, ವಾಸ್ತವಿಕ, ವಾಸ್ತುಶಿಲ್ಪ, ಜೀವನಕ್ಕೆ ಅನನ್ಯವಾಗಿದೆ.

"ಕಲೆ ಒಂದು ಕಾಲದ, ಒಂದು ದೇಶದ, ಒಂದು ಜನಾಂಗದ, ಹೃದಯವನ್ನು ಮಿಡಿಯುತ್ತದೆ."[೬] ಆನತೆಯ ಆಸೆ ಆಕಾಂಕ್ಷೆಗಳನ್ನು ಮತ್ತು ಮನೋಬಾವನೆಗಳನ್ನು ಅವರ ಬದುಕಿನ ಬಾಳಿದ ರೀತಿಯನ್ನು ಬಿಂಬಿಸುತ್ತದೆ. ಅವರು ನಂಬಿದ ಜೀವನ ಮೌಲ್ಯಗಳನ್ನು ಸೂಚಿಸುತ್ತದೆ. ಕಲಾ ಕ್ಷೇತ್ರಕ್ಕೆ ವಿಜಯನಗರ ಸಾಮ್ರಾಜ್ಯದ ಕೊಡುಗೆ ಸಾಮಾನ್ಯವಾದುದೇನಲ್ಲ ಆ ಕಲೆಯು ವಿವಿಧ ಕುತೂಹಲಕಾರಿಯಾಗಿದೆ.

ಗೆರೆ, ಗೀಟು, ರೇಖೆ ಮನುಕುಲದಷ್ಟೇ ಪ್ರಾಚೀನವಾದರೂ ಆ ಮೂಲಕ ಮಾನವ ಕಲಾತ್ಮಕ ಸಂವಹನ ಮಾಡುತ್ತಾ ಬಂದಿರಬಹುದಾದರೂ ೧೫ ನೇ ಶತಮಾನದಿಂದ ಶುದ್ದ ಕಲೆಯಾಗಿ ಇದು ಜಗತ್ತಿನ ಹಲವೆಡೆ ಜನಪ್ರಿಯವಾಗಿರುವುದು ಕುತೂಹಲಕಾರಿ ಸಂಗತಿ. ರಂಬೆಯ ಗುಣ ಕೇವಲ ಎಲೆ ತೋರಿಸುವುದಕ್ಕೆ ಸೀಮಿತವಾಗಿಲ್ಲ. ಇದಕ್ಕೆ ಮೀರಿದ ಸತ್ವ, ಗುಣಗಳು ಇದರಲ್ಲಿವೆ. ಅದರ ಚಾಲನೆಯಲ್ಲಿ ಒಂದು ಅಂತರ್ಗತ ಚೈತನ್ಯವಿದೆ. ಇದರಿಂದ ಒಂದು ಸಂಗತಿ ಸ್ಪಷ್ಟ ಸಾಧಾರಣವೆನಿಸುವ ಒಂದು ಗೀರು, ರೆಂಬೆಯುಲ್ಲಿ ಪಳಗಿದ ಕೈಯಲ್ಲಿ ಎಷ್ಟು ಪ್ರಬಲ ಮತ್ತು ಪರಿಣಾಮಕಾರಿ ಮಾಧ್ಯಮವಾಗುತ್ತದೆಂಬುದನ್ನು ಪ್ರತ್ಯಕ್ಷ ನೋಡಿಯೇ ಅರಿಯಬೇಕು. ಮನದಾಳದ ನೈಜ- ಭಾವಕ ಕಲ್ಪನೆಗಳಿಗೆಲ್ಲ ಒಂದು ರೂಪುಗೊಂಡವು ಕೊಡುವ ಶಕ್ತಿಯಿದೆ. ಈ ರೆಂಬೆಗೆ ಚಿತ್ರ ಶಿಲ್ಪ ಮೂಲತಃ ರೂಪತಾಳುವುದೇ ಈ ರೇಖೆಯಿಂದ ಅದರ ಒಳ ವಿವರಗಳು ಎದ್ದು ಕಾಣುವುದು ರೇಖೆಯ ಮೂಲಕವೇ "ಭಾರತೀಯ ಕಲೆಯಲ್ಲಿ ರೇಖೆಗೆ ಬಹಳ ಮಹತ್ವವಿದೆ. ರೇಖಾಂ ಪ್ರಶಂಸತ್ಯಾಕಚಾರ್ಯ,

ರೇಖಾಳ ಪ್ರಶಂಸಂತಿ, ಆಚಾರ್ಯ (ವಿಷ್ಣಾದರ್ಮೋತ್ತರಂ) ಡ್ರಾಯಿಂಗ್ ದಿ ಪಾಫಾದರ್ ಆಫ್ ಪೇಟಿಂಗ್ (ಪಸ್ಸೆರಿ-೧೭೭೨) ಎಂಬ ಹೇಳಿಕೆ ಚಿತ್ರಕನ ರೇಖಾ ಸಿದ್ದಿಯನ್ನು ಪ್ರಶಂಸಿಸಿದ ಸಂದರ್ಭ ಸೂಚಿಸುವುದು. ಎನ್‌ಗ್ರೇಮಿಗ್ಸ್ ಅಥವಾ ಅಚ್ಚು ಚಿತ್ರಕಲೆ ಹೆಚ್ಚು ಪ್ರಚಾರಗೊಂಡ ಕಾಲಘಟ್ಟ ವಿಜಯನಗರ ಸಾಮ್ರಾಜ್ಯದರಾದ್ದು. ಅದರ ಹೊಸ ಸಾಧ್ಯತೆಗಳನ್ನು ಈ ಕಾಲ ತೋರಿಸಿಕೊಟ್ಟಿದೆ, ನಿಯಂತ್ರಣ ಕ್ರಮ ಅನುಸರಿಸಿ ನಿಷ್ಕೃತ ವಸ್ತು ನಿರೂಪಣೆ ಮಾಡುತ್ತಿದ್ದ ಕಡೆ ಈ ರೇಖೆ ಹೊಸ ಹೊಸ ರಚನೆಗಳನ್ನು ಸೃಷ್ಟಿಸಲು ಕಾರಣವಾಯಿತು."[೮೦] ರೇಖಾ ಚಿತ್ರವೆಂದರೆ ಒಂದು ಮೂಲಚಿತ್ರದ ಕರಡು ಪ್ರತಿ ಎಂಬ ಭಾವನೆ ಮೀರಿದ ಈ ಕಾಲದಲ್ಲಿ ರೇಖಾಚಿತ್ರಕಲೆ ಒಂದು ಸ್ವಯಂ ಪೂರ್ಣ ಕಲೆಯಾಗಿಯೂ ಬೆಳೆದು ಬಂದಿದೆ.

**ಕೋಲಾಟ**

ಕೋಲಾಟ ಒಂದು ಸಮೂಹ ನೃತ್ಯವಾಗಿ ಹಾಡು ಕುಣಿತಗಳಿಂದ ಕೋಲಾಟಕ್ಕೆ ಹೆಚ್ಚಿನ ಶೋಭೆ ತರುವ ಕಲೆ ಯುವಕರಿಗೆ ಮತ್ತು ಯುವತಿಯರಲ್ಲಿ ನಿರ್ಧಿಷ್ಟವಾದ ಗತ್ತಿನಲ್ಲಿ ಒಳ್ಳೆಯ ವ್ಯಾಯಾಮವನ್ನೊದಗಿಸುವ ಕಲೆಯಾದುದರಿಂದ ಕರ್ನಾಟಕವಷ್ಟೇ ಅಲ್ಲ. "ಭಾರತದ ಗ್ರಾಮಾಂತರ ಪ್ರದೇಶಗಳಲ್ಲಿಯೂ ಅದು ಪ್ರಚಲಿತವಾಗಿದೆ. ಗೋಪಿ ಶಾಸ್ತ್ರೀಯರು ಶ್ರೀ ಕೃಷ್ಣನೊಂದಿಗೆ ಬಣ್ಣದ ಕೋಲು ಹಿಡಿದು ಆಟವಾಡಿದ ಕಥೆ ಕೇಳಿದ್ದೇವೆ. ಇದು ಪ್ರಾಚೀನ ಕಾಲದ ಪಶುಪಾಲನೆ, ಕೃಷಿ ಬದುಕಿನ ಜನಸಮುದಾಯಗಳಲ್ಲಿ ಅದರಲ್ಲೂ ಬುಡಕಟ್ಟು ಸಮುದಾಯಗಳಲ್ಲಿ ಈ ಕಲೆಯು ಹೆಚ್ಚಾಗಿ ಕಂಡುಬರುವುದು."[೮೧] ವಿಜಯನಗರ ಸಾಮ್ರಾಜ್ಯದ ಹಂಪಿ ಪರಿಸರದಲ್ಲಿ ಕಂಡು ಬರುವ ಕಲೆಯಾಗಿದೆ. ಕೋಲಾಟವು ಹಿಡಿಯಲ್ಲಿ ದಪ್ಪವಾಗಿ ತುದಿಯಲ್ಲಿ ಸಣ್ಣದಾಗಿರುವ ಬಣ್ಣ ಹಚ್ಚಿದ್ದೇ ಕೋಲು. ಅದು ಸುಮಾರು ಒಂದಿಡಿ ಉದ್ದವಾಗಿರುತ್ತದೆ. ಬಡಿಯುವ ಕೋಲಿಗೂ ಗೆಜ್ಜೆ ಕುಣಿಯುವ ಕಾಲಿಗೂ ಗೆಜ್ಜೆ ಕಲಾವಿದನ ಚಡ್ಡಿಯನ್ನು ಏರುಗಟ್ಟಿದ ಗಂಟೆಯನ್ನೋ ಧರಿಸಿ ಸೊಂಟಕ್ಕೆ ಕೆಂಪು ವಸ್ತ್ರ ಕಟ್ಟಿರುತ್ತಾನೆ. ಹೆಂಗಸಾಗಿದ್ದರೆ ಮೊಣಕಾಲಿನ ಎತ್ತರಕ್ಕೆ ಸೀರೆಯುಟ್ಟು ಸೆರಗನ್ನು ಸೊಂಟಕ್ಕೆ ಬಿಗಿದಿರುತ್ತಾರೆ. "ಪೌರಾಣಿಕವೋ, ಇತಿಹಾಸವೋ ಆದ ವಿಷಯಗಳನ್ನು ಕುರಿತು ಪ್ರಸಂಗಗಳನ್ನು ಹಾಕಲಾಗುತ್ತದೆ. ಕೋಲಾಟಗಳಲ್ಲಿ ವಿಶೇಷವಾಗಿ ಗೌರಿಹುಣ್ಣಿಮೆಯ ಸಂದರ್ಭದಲ್ಲಿ ಹೆಣ್ಣೂ ಮಕ್ಕಳು ಗೌರಿ, ಕೋಲು ಹಾಕುತ್ತಾ ಕುಣಿಯುತ್ತಾ ಮನೆ ಮನೆಗೆ ಸಂಚರಿಸುವ ಸಂಪ್ರದಾಯ ವರ್ಷದ ಗೌರಿಹುಣ್ಣಿಮೆ ಸಂದರ್ಭದಲ್ಲಿ ಕಂಡುಬರುತ್ತದೆ."[೮೨] ಹಾಗೆಯೇ ಲಂಬಾಣಿ ಸಮುದಾಯದ ಹೆಣ್ಣು ಮಕ್ಕಳು ಹೋಳಿ ಹಬ್ಬದ ಸಂದರ್ಭದಲ್ಲಿ ಆಡುವ ಕೋಲಾಟ ಈ ಪ್ರದೇಶಗಳಲ್ಲಿ ಹೆಚ್ಚಾಗಿ ಕಂಡು ಬರುತ್ತಿದ್ದವು. ಹೀಗಾಗಿ ಕೋಲಾಟ ಹೆಣ್ಣುಮಕ್ಕಳ ಒಂದು ಪ್ರಮುಖ ನೃತ್ಯಕಲೆಯಾಗಿತ್ತೆಂಬುದಾಗಿ ಇದರಿಂದ ತಿಳಿದು ಬರುತ್ತದೆ. ಅಲ್ಲಿದೆ ಕೋಲಾಟದ ವಿವಿಧ ಭಂಗಿಗಳು ಮಹಾನವಮಿ ದಿಬ್ಬ ಮತ್ತು ವಿಠಲ ದೇವಾಲಯ ಗೋಡೆಗಳ ಮೇಲೆ ಕಂಡು ಬರುವವು.

**ಕೊರವಂಜಿ**

ಕೂರಮರೆನಿಸುವ, ಕೊರವಂಜಿಯ ಉಡಿಗೆ–ತೊಡಿಗೆ ಸಾಮಾನ್ಯವಾಗಿದ್ದರೂ ಆಕರ್ಷಕವಾಗಿರುತ್ತದೆ. ಮೈತುಂಬ ಹಚ್ಚಿಕೊಂಡ ಕಪ್ಪು ಕಲೆಗಳೇ ಅಲಂಕಾರ ತಲೆಗೆ ಒಯ್ಯಾರವಾಗಿ ಕಟ್ಟಿಕೊಂಡ ತುರುಬು, ಕಾಲಿಗೆ ಕಡಗ, ಮೂಗಿಗೆ ಮೂಗೂತಿ, ಕಂಕುಳಲ್ಲಿ ಬಿದಿರಿನ ಬುಟ್ಟಿ, ಬಾಯಲ್ಲಿ ಎಲೆ ಅಡಿಕೆ ಜಗಿಯುತ್ತಾ ಹೇಳುವೆ ಕಣಿ, ಹೇಳುವೆ ಕಣಿ ಎಂದು ಬೆಡಗಿನಲ್ಲಿ ಹಾಡುತ್ತಾ ಬರುತ್ತಾರೆ. ಜನಸಾಮಾನ್ಯರಿಂದ ರಾಜರವರೆಗೆ ಎಲ್ಲರಿಗೂ ಕಣಿ ಹೇಳುವ ಆಕೆಯಲ್ಲಿ ನಂಬಿಕೆಯಿಟ್ಟಿದ್ದರು. ಕಣಿ ಹೇಳುವುದೇ ಕೊರವಂಜಿಯ ಮಹತ್ವದ ಪಾತ್ರ ವಹಿಸುತ್ತಿದ್ದರು ಹಾಗೂ ವಿಜಯನಗರ ಸ್ಮಾರಕ ಶಿಲ್ಪಗಳಲ್ಲಿ ಪ್ರತಿಬಿಂಬಿಸುವ ಸಾಮಾಜಿಕ ಚಿತ್ರಣಗಳಾಗಿವೆ.

**ಗೊಂದಲಿಗರ ಮೇಳ**

ಗೊಂದಲಿಗರ ಈ ಕಲೆಯು ಸಾಮಾಜಿಕ ಜೀವನದಲ್ಲಿ ಒಂದು ಅದ್ಭುತವಾದ ಕಲೆ. "ಗೊಂದಲಿಗರು ಮೂಲತಃ ಮಹಾರಾಷ್ಟ್ರದವರು, ಶಿವಾಜಿಕಾಲದಲ್ಲಿ ಗೂಢಚಾರರಾಗಿ, ಮುಸ್ಲೀಮರ ರಾಜ್ಯಕ್ಕೆ ಬಂದು ಗೊಂದಲ ಹಾಕುವ ಧಾರ್ಮಿಕ ವಿಧಾನದ ಮೂಲಕ ಗೂಢವಾರ್ತೆಗಳನ್ನು ಸಂಗ್ರಹಿಸುತ್ತಿದ್ದರು."[೪೩] ಗೊಂದಲಿಗರು ಕೆಲವರ ಧಾರ್ಮಿಕ ದೇವತೆಗಳನ್ನು ಆಚರಿಸುತ್ತಿದ್ದರು. ಅಂಬಾಭವಾನಿ, ನೀಲಮ್ಮ, ರೇಣುಕಾದೇವಿಯರ ಭಕ್ತರಾದ ಗೊಂದಲಿಗರ ಮೇಳದಲ್ಲಿ ೩ ಜನರಿರುತ್ತಾರೆ. ನಾಯಕನು ತಾಳ, ಉಳಿದಿಬ್ಬರು ಸಂಬಾಳ ಮತ್ತು ಶೃತಿ ಹಿಡಿಯುತ್ತಾರೆ. ಸಂಬಾಳ ಎನ್ನುವುದು ಚರ್ಮವಾದ್ಯ ಕೊರಳಿಗೆ ಜೋಲು ಬಿಟ್ಟು ಎರಡೂ ಕೈಯಲ್ಲಿ ಕಡ್ಡಿಗಳಿಂದ ಬಾರಿಸುವಂಥದು. ತಲೆಗೆ ಕೆಂಪು ಅಥವಾ ಬಿಳಿ ಮಾಲು, ಸೊಂಟಕ್ಕೆ ಧೋತರು, ಮೈಗೆ ನಿಲುವಂಗಿ, ಕೊರಳಿಗೆ ಕವಡಿಸರ, ಕಾಲಿಗೆ ಗೆಜ್ಜೆ ಮುಮ್ಮಳದಲ್ಲಿ ನಿತ ನಾಯಕನಿಗೆ ದಕ್ಷಿಣ ಕನ್ನಡದಲ್ಲಿ "ಪರಶುರಾಮ" ಎನ್ನುತ್ತಾರೆ. ಜಗದಂಬೆಯನ್ನು ಪ್ರಾರ್ಥಿಸಿ ತಮಗೆ ಬರುವ ನೂರಾರು ಕಥೆಗಳಲ್ಲಿ ಯಾವುದು ಹೇಳಬೇಕು ಎನ್ನುವುದನ್ನು ಶ್ರೋತೃಗಳಿಗೆ ಕೇಳಿತಿಳಿದುಕೊಂಡು ಜನಪದ ವಿಧಾನದಲ್ಲಿ ನೃತ್ಯ ಮಾಡುತ್ತಿದ್ದರು ಮತ್ತು ಈ ಅಲೆಮಾರಿಯ ಜನ ಸಮುದಾಯಗಳು ಜೀವನಾರ್ಥಕ್ಕೆ ಬೇಕಾಗುವ ಅನೇಕ ರೀತಿಯ ನೆಲೆಗಳಲ್ಲಿ ನೆಲೆಸುವರು. ಪ್ರಸ್ತುತ ಈ ಸಮುದಾಯಗಳು ಹಂಪಿ ಸುತ್ತಮುತ್ತಲಿನಲ್ಲಿ ಹೆಚ್ಚಾಗಿ ಕಂಡುಬರುವ ಜನಸಮುದಾಯಗಳಾಗಿವೆ.

**ಕೋಲೆ ಬಸವ**

ಕೋಲೆಬಸವನನ್ನು ಆಡಿಸುವವರಿಗೆ ಗಂಗೆತ್ತಿನವರು, ಕವಲೆತ್ತಿನವರು ಎಂದು ಹೇಳುವರು. ಇದೊಂದು ಸಾಮಾಜಿಕ ವೃತ್ತಿಯ ಕಲೆಯೆಂದು ಹೇಳಲಾಗಿದೆ. "ಹೆಚ್ಚಾಗಿ ಬಾಲಕರು ಮಾತ್ರ ಬುರ್ ಬುರ್ ಬಸವಣ್ಣ ಎನ್ನುತ್ತಾರೆ. ಅವರು ಅಲೆಮಾರಿಗಳಾಗಿದ್ದರೂ ಈ ಆಟ ಅವರಿಗೆ ಉಪ ಕಸುಬು ಆಗಿತ್ತು. ಕವಲೆತ್ತಿನಂತೆ ತಲೆಯಾಡಿಸುವ ಎನ್ನವ ಲೋಕೋಕ್ತಿಯಲ್ಲಿ ಆ ಕಲೆಯು ಜೀವಾಳವಾಗಿದೆ."[೪೪]

ಬೀದಿಯ ನಾಟಕವೆನಿಸುವ ಪ್ರದರ್ಶನದಲ್ಲಿ ರಂಗಜ್ಜಿಕ್ಕೆ ಯಾವುದೂ ಬೇಕಿಲ್ಲ. ಎರಡು ಬಸವಗಳು ರಾಮ–ಲಕ್ಷ್ಮಣ, ಇನ್ನೊಂದು ಸೀತೆ ೩ ಬಸವಗಳಿಗೆ, ೩ ಕಲಾವಿದರು ನಿಂತು ಕಥೆಯನ್ನು ಸಾಗಿಸುತ್ತಾರೆ. ಇವರು ಬಿಳಿಯ ಕಾಶಿ ಪಂಚೆ, ಅಂಗಿ ಕೋಟು, ತಲೆಗೆ ಪೇಟ, ಹೆಗಲಿಗೆ ಜೋಳಿಗೆ ಇವುಗಳಿಂದ ಕಲಾವಿದರು ಸುಸಜ್ಜಿತನಾಗುವನು. ಬಸವನ ಕೊಂಬುಗಳಿಗೆ ಸುತ್ತಿದ ಬಣ್ಣ ಬಣ್ಣದ ಬಟ್ಟೆ, ಹಣೆಯ ಮೇಲೆ ಆಂಜನೇಯನ ಮುದ್ರೆಯುಳ್ಳ ಹಿತ್ತಾಳೆ, ತಗಡಿನ ಅಲಂಕಾರ ಇರುತ್ತದೆ. ಈ ಕಲೆಯನ್ನು ಕಲಿಸಲು ದೇವರಿಗೆ ಬಿಟ್ಟ ಬಸವನನ್ನೇ ಆರಿಸಿಕೊಳ್ಳುತ್ತಾರೆ. ಡೋಲು, ನಾಗಸ್ವರ, ಮುಖ ವೀಣೆಗಳನ್ನು ಕಲಾವಿದನು ಬಳಸಲಾಗಿದೆ. ಇವುಗಳು ಹೆಚ್ಚಾಗಿ ಹಂಪಿ ಸುತ್ತಮುತ್ತಲಿನಲ್ಲಿ ಕಂಡುಬರವು ಸಾಮಾಜಿಕ ಚಿತ್ರಣಗಳಾಗಿವೆ.

**ಲಂಬಾಣಿಕುಣಿತ**

ಲಂಬಾಣಿ ಸಮುದಾಯಗಳು ರಾಜಸ್ಥಾನದ ಕಡೆಯಿಂದ ಕರ್ನಾಟಕಕ್ಕೆ ಬಂದು ಕಾಡಿನಲ್ಲಿ ವಸತಿ ಮಾಡಿದ ಜನಾಂಗವೇ ಲಂಬಾಣಿ ಜನ. ಈ ಸಮುದಾಯಗಳು ಅಲೆಮಾರಿ ಜನಾಂಗದವರಾಗಿದ್ದು, ಇವರ ಕಲೆಯು ಅದ್ಬುತವಾಗಿದ್ದು, ಇವರ ಲಿಪಿಯಿಲ್ಲದ ಭಾಷೆಯನ್ನಾಡುತ್ತಾರೆ. ವಸತಿ ಸ್ಥಳವೇ ಲಂಬಾಣಿತಾಂಡ. ಲಂಬಾಣಿಗಳು ಕಷ್ಟ ಜೀವಿಗಳು ದುಡಿದು ತಿಂದವರಲ್ಲದೇ ಭಿಕ್ಷೆ ಬೇಡಿದವರಲ್ಲ. ಅತಿಥಿ ಸತ್ಕಾರಕ್ಕೆ ಎತ್ತಿದ ಕೈಯಾಗಿತ್ತು. "ಇವರ ಹೆಂಗಸರು ಕೆಂಪುಬಣ್ಣದ ಲಂಗ ಉಟ್ಟು, ಕಾಂಚೋಳಿ ಎಂಬ ಕುಬುಸ ತೊಡುವರು, ಲಂಗ ಕಾಂಚೋಳಿಯ ಬೇಲಿನ ಕಸೂತಿ ಗಾಜಿನ ಬಿಲ್ಲಿ ಅಳವಡಿಸಿದ ಕೌಶಲ್ಯ ನೋಡುವಂತಿದೆ."[೪೫] ಮೇಲು ಹೊದಿಕೆಯನ್ನು ಬಲದಿಂದ ಎಡಕ್ಕೆ ಎಳೆಯುತ್ತಾರೆ. ಕೈಗಳಿಗೆ ಅಗಲುಪಟ್ಟಿಯ ದಂತದ ಬಳೆಗಳು, ಭಲ್ಯ, ಜೋಡಿ, ಮಾಡ್ಯ ಎಂಬ ಹೆಸರು, ಅವಕ್ಕೆ ಕೊರಳಲ್ಲಿ ರಾಫಿಯಾಧಾರ, ವಾಂತ್ಯಾ ಎಂಬ ಹಾರವೂ ಇರುವುದು. ಹಾಗೂ ಈ ಸಮುದಾಯಗಳು ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಜೀವನ ರೂಪಿಸಿಕೊಳ್ಳಲು ಕಂಡುಬಂದ ಸಂಗತಿಯಾಗಿ, ಪ್ರಸ್ತುತ ದಿನಗಳಲ್ಲಿ ಹಂಪಿಯ ಪರಿಸರದಲ್ಲಿ ಹೆಚ್ಚಾಗಿ ಕಂಡುಬರುತ್ತಾರೆ.

**೪.೫. ಪುರಾಣ (ಪೌರಾಣಿಕ)**

ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲೂಕು ಹಂಪಿ ವಿರೂಪಾಕ್ಷೇಶ್ವರ ಸ್ವಾಮಿ ದೇವಸ್ಥಾನವು ಎಲ್ಲಾ ರೀತಿಯ ಭಕ್ತರು ನಡೆದುಕೊಳ್ಳುವ ಪೌರಾಣಿಕ ಹಾಗೂ ಐತಿಹಾಸಿಕ ಹಿನ್ನಲೆಯುಳ್ಳ ಅತೀ ಪ್ರಸಿದ್ದವಾದ ಪುಣ್ಯಕ್ಷೇತ್ರವಾಗಿದೆ. ದಕ್ಷ ಬ್ರಹ್ಮನ ಮಗಳ ದಾಕ್ಷಾಯಣಿದೇವಿಯ, ದಕ್ಷ ಬ್ರಹ್ಮನು ಏರ್ಪಡಿಸಿದ ಯಜ್ಞಕುಂಡದಲ್ಲಿ ದುಮುಕಿದ ಮೇಲೆ ಪರಮೇಶ್ವರನು ಹಿಮಾಲಯದಿಂದ ದಕ್ಷಿಣದ ಮಾರ್ಗವಾಗಿ ಬಂದು ಶ್ರೀ ಹಂಪಿ ಕ್ಷೇತ್ರದ ಹೇಮಕೂಟದ ಪರ್ವತದಲ್ಲಿ ತಪಸ್ಸಿಗೆ ಕುಳಿತನು. ಮನ್ಮತನು ನನ್ನ ಸಂಹಾರ ಮಾಡಿ, ಪಾರ್ವತಿ ದೇವಿಯನ್ನು ಪಂಪಾದೇವಿ ವಿವಾಹವಾಗಿ, ಶ್ರೀ ವಿರೂಪಾಕ್ಷೇಶ್ವರ ಸ್ವಾಮಿಯಾಗಿ ವಿಶೇಷವಾದ ಅಕ್ಷ (ಕಣ್ಣು) ಮತ್ತು ರೂಪವನ್ನು ಹೊಂದಿದವನು,

ದೈವಾದತ್ತವಾಗಿ ನಿರ್ಮಿತಗೊಂಡಿರುವ. ೫ ಪರ್ವತಗಳಾದ ಅಂಜನಾದ್ರಿ ಬೆಟ್ಟ, ಮಾಲ್ಯವಂತ, ಮಾತಂಗ ಪರ್ವತ, ಋಕ್ಷಮೂಕ, ಹೇಮಕೂಟ ಪರ್ವತಗಳು ಮಧ್ಯ ತುಂಗಭದ್ರ ನದಿಯ ದಡದ ಈ ಪುಣ್ಯ ಭೂಮಿಯನ್ನು ಚಾಕ್ಷು, ಷಾಖ್ಯೆ, ಮನ್ವಂತರದಲ್ಲಿ ಸ್ವರ್ಯ ಭೂಲಿಂಗ ರೂಪವಾಗಿ ನೆಲೆಸಿರುವವನೇ ಈ ವಿರೂಪಾಕ್ಷೇಶ್ವರ. ಹಂಪಿ ಕ್ಷೇತ್ರದಲ್ಲಿರುವ ಪಂಚ ಲಿಂಗಗಳಾದ ಶ್ರೀ ಕಿನ್ನರೇಶ್ವರ, ದಕ್ಷಿಣ ದಿಕ್ಕಿಗೆ, ಶ್ರೀ ಜಂಭುನಾಥೇಶ್ವರ, ಪಶ್ಚಿಮ ದಿಕ್ಕಿಗೆ, ಶ್ರೀ ಸೋಮೇಶ್ವರ ಉತ್ತರ ದಿಕ್ಕಿಗೆ, ಶ್ರೀ ವಾಣಿಭದ್ರೇಶ್ವರ ಮಧ್ಯಭಾಗದಲ್ಲಿ, ಶ್ರೀ ವಿರೂಪಾಕ್ಷೇಶ್ವರ ಹೀಗೆ ಪಂಚಲಿಂಗಗಳನ್ನು ಹೊಂದಿ ಪ್ರಸಿದ್ಧಿಯಾಗಿದೆ "ಈ ಮಹಾಕ್ಷೇತ್ರಕ್ಕೆ ದಕ್ಷಿಣಕಾಶಿ ಎಂದೇ ಹೆಸರಿರುತ್ತದೆ. ತ್ರೇತಾಯುಗದಲ್ಲಿ ಶ್ರೀ ರಾಮಚಂದ್ರ ದೇವರು ಈ ಹಿಂದೇ ಕಿಷ್ಕಿಂದ ಕ್ಷೇತ್ರವೆಂದು ಪ್ರಸಿದ್ಧಿ ಪಡೆದಿದೆ."[೪೬] ಇದೇ ಹಂಪಿಕ್ಷೇತ್ರದಲ್ಲಿ ಸುಗ್ರೀವನ ಸ್ನೇಹವನ್ನು ಪಡೆದ, ಚಾತುರ್ಮಾಸ ಕಳೆದರೆಂದು, ಈ ವಿರೂಪಾಕ್ಷೇಶ್ವರ ಸ್ವಾಮಿಯ ದರ್ಶನ ಪಡೆದರೆಂದು ಪುರಾಣದಲ್ಲಿ ಗೋಚರವಾಗುತ್ತದೆ. ವೇದವ್ಯಾಸರು, ವಿರುಚಿತ ಸಂಸ್ಕೃತಿ ಮಹಾಗ್ರಂಥಸ್ಕಂದ ಪುರಾಣದಲ್ಲಿ ಶ್ರೀ ವಿರೂಪಾಕ್ಷೇಶ್ವರ ಹಾಗೂ ಪಂಪಾಕ್ಷೇತ್ರದ ಮಹಿಮೆಯ ವರ್ಣನೆಯನ್ನು ಮಾಡಿದ್ದಾರೆ. ಈ ಭಾಗವನ್ನು ಪಂಪಾಮಹಾತ್ಮ ಎನ್ನುವರು. ಇವರ ಪ್ರಕಾರ ಪಂಪಾಕ್ಷೇತ್ರವು ೩೦೦ ಯುಗಗಳಷ್ಟು ಪುರಾತನವಾದುದು. ಎಂದು ಸ್ಪಷ್ಟವಾಗುತ್ತದೆ.

"ಶ್ರೀ ವಿರೂಪಾಕ್ಷೇಶ್ವರ ಸ್ವಾಮಿಯ ದೇವಸ್ಥಾನವನ್ನು ರಾಷ್ಟ್ರಕೂಟರು, ಬಾದಾಮಿ ಚಾಲುಕ್ಯರು, ಹೊಯ್ಸಳರು, ವಿಜಯನಗರದ ಅರಸರು ಹಂತವಾಗಿ ಅಭಿವೃದ್ಧಿಪಡಿಸಿದ್ದಾರೆ."[೪೭] ವಿಜಯನಗರ ಅರಸರ ಕಾಲದಲ್ಲಿ ಶ್ರೀ ವಿರೂಪಾಕ್ಷೇಶ್ವರಸ್ವಾಮಿ ದೇವಸ್ಥಾನವನ್ನು ಸರ್ವತೋಮುಖ ಅಭಿವೃದ್ಧಿಯನ್ನು ಹೊಂದಿರುತ್ತದೆ. ವಿಸ್ತಾರವಾದ ತುಂಗಾಭದ್ರ ನದಿ ಉಳಿದ ೩ ಭಾಗಗಳಲ್ಲಿ ಕಠಿಣವಾದ ಬಂಡೆಗಲ್ಲುಗಳ ಬೆಟ್ಟದ ಸಾಲುಗಳು ಕೋಟೆಯಂತಿರುವ ಪ್ರಕೃತಿದತ್ತವಾದ ಅದ್ಬುತವಾದ ಆಯಾ ಕಟ್ಟಿನ ಸ್ಥಳ ಮತ್ತು ಮೊಲ, ನಾಯಿಯನ್ನು ಓಡಿಸಿಕೊಂಡು ಹೋದುದನ್ನು ನೋಡಿ ಹಂಪಿಯಲ್ಲಿ ಹಿಂದೂ ಧರ್ಮದ ರಕ್ಷಣೆಗಾಗಿ ಶ್ರೀ ವಿದ್ಯಾರಣ್ಯ ಆಶೀರ್ವಾದದಿಂದ ಹರಿಹರ ಮತ್ತು ಬುಕ್ಕರು ಕ್ರಿ.ಶ. ೧೩೩೬ ರಲ್ಲಿ ಹಂಪಿ ಕ್ಷೇತ್ರದಲ್ಲಿ ವಿಜಯನಗರ ಸಾಮ್ರಾಜ್ಯವನ್ನು ಪ್ರತಿಷ್ಟಾಪಿಸಿರುವುದಾಗಿ ಇತಿಹಾಸಕಾರರ ಅಭಿಪ್ರಾಯವಾಗಿರುತ್ತದೆ. ಹೀಗೆ ಪುರಾತನ ಕಾಲದಲ್ಲಿ ಪುಣ್ಯಕ್ಷೇತ್ರ ಶಕ್ತಿಶಾಲಿ ಸಾಮ್ರಾಜ್ಯದ ರಾಜದಾನಿ ಆಯಿತು. ಶ್ರೀ ವಿರೂಪಾಕ್ಷೇಶ್ವರ ಸ್ವಾಮಿ ದೇವಸ್ಥಾನದಲ್ಲಿ ದಿನಂ ಪ್ರತಿ ಶೈವಾಗಮ ಪದ್ದತಿಯಲ್ಲಿ ಸಮುದಾಯಗಳ ಬದ್ದ ಆಚರಣೆಗಳು ಪೂಜೆ ವಿಧಿವಿಧಾನವನ್ನು ತ್ರಿಕಾಲ ಪೂಜೆ, ತ್ರಿಕಾಲ ನೈವೇಧ್ಯಗಳು ಜರುಗುತ್ತವೆ. ಈ ಮೇಲಿನ ವಿಷಯವನ್ನು ವಿರೂಪಾಕ್ಷೇಶ್ವರ ದೇವಾಲಯದೊಳಗಿನ ನಾಮಫಲಕದಲ್ಲಿರುವ ಪುರಾಣದ ಹಿನ್ನೆಲೆಯಲ್ಲಿ ನೋಡಲಾಗಿದೆ. ಶ್ರೀ ಭುವನೇಶ್ವರಿದೇವಿ, ಶ್ರೀಪಾರ್ವತಿದೇವಿ ಸಮೇತ ಶ್ರೀ ವಿರೂಪಾಕ್ಷಸ್ವಾಮಿಯವರು ಹಂಪಿ ಕ್ಷೇತ್ರಕ್ಕೆ ಆಗಮಿಸುವ ಭಕ್ತರ ಇಷ್ಟಾರ್ಥಗಳನ್ನು ಈಡೇರಿಸುವ ಧಾರ್ಮಿಕ ಕ್ಷೇತ್ರವಾಗಿದೆಂದು ಹೇಳಲಾಗಿದೆ. ಹೀಗೆ ಹಂಪಿಯ ಇತಿಹಾಸವು ದೇಶದಾದ್ಯಂತ ಹರಡಿರುವ ಪೌರಾಣಿಕ, ರಾಮಾಯಣ ಮತ್ತು ವಾಸ್ತುಶಿಲ್ಪಕಲೆ, ಸಾಮಾಜಿಕ ಚಿತ್ರಕಲೆಗಳು, ಸಂಗೀತ,

ಸಾಹಿತ್ಯ ಇನ್ನು ಅನೇಕ ಹಬ್ಬದ ಹರಿದಿನಗಳನ್ನು ಆಚರಿಸುವ ಮತ್ತು ಇತಿಹಾಸವನ್ನು ಸ್ಪಷ್ಟಪಡಿಸುವ ಪುಣ್ಯ ಕ್ಷೇತ್ರ ಹಂಪಿಯಾಗಿದೆ.. ಕೆಲವೊಂದರ ಕತೆಗಳು ಭಾರತೀಯ ಚಿತ್ರಕಲೆ ಮತ್ತು ನವ್ಯಕಲೆ ಹಾಗೂ ಕಲೆಗಾರರು ಎಂಬ ಪುಸ್ತಕಗಳನ್ನು ಬರೆಯಲಾಗಿತ್ತು ಮತ್ತು ಪೌರಾಣಿಕ (ಪುರಾಣ)ಗಳು ಸಹ ಕಲೆಯಂತವು ಹೇಳಲಾಗಿ ಪುರಾಣಗಳಿಂದ ಅನೇಕ ವಿಷಯಗಳು ಮಾಸಿಹೋದ ಇತಿಹಾಸವನ್ನು ನೆನಪಿಸುವುದೇ ಪುರಾಣಗಳ ಬೆಳೆದ ಸಂಗತಿಗಳಾಗಿವೆ. ಇಲ್ಲಿ “ದ್ವಾಪರ ಯುಗದಲ್ಲಿ ಅನೇಕ ಋಷಿಮುನಿ, ಯಕ್ಷ, ಕಿನ್ನರರು, ಗಂಧರ್ವ, ಸಪ್ತ ಮಾತ್ರಕೆಯರು ತಪಸ್ಸನ್ನು ಆಚರಿಸಿದ ಪಂಪಾ ಕ್ಷೇತ್ರದಲ್ಲಿ ಪಾಂಡವರನ್ನು ತಮ್ಮ ಅಜ್ಞಾತವಾಸದಲ್ಲಿ ‘ದಂಡಕಾರಣ್ಯ’ವಾಗಿದ್ದ ಈ ಕ್ಷೇತ್ರದಲ್ಲಿ ಕಳೆದರೆಂಬ ಪ್ರತೀತಿಯನ್ನು ಕೇಳುತ್ತೇವೆ. ಶ್ರೀ ಪಂಪಾ ವಿರೂಪಾಕ್ಷ ಭುವನೇಶ್ವರಿ ದೇವತೆಗಳನ್ನು ಆರಾಧಿಸಿದ ಬಗ್ಗೆ ಕೇಳುತ್ತೇವೆ.”[೮೮]

“ವಿಜಯನಗರ ಸಾಮ್ರಾಜ್ಯಕ್ಕೆ ಮೂಲಸ್ಥಳ ಕುಮ್ಮಟದುರ್ಗ ಈ ನಾಯಕರ ಸಂಗಮ ಅಥವಾ ಭಾವಸಂಗಮ (ಕುಮಾರರಾಮನ ತಂಗಿ ಮಾರಮ್ಮನನ್ನು ಈತ ಮದುವೆಯಾಗಿದ್ದುದಕ್ಕೆ ಬಾವ ಎಂದು ಕರೆಯುತ್ತಾರೆ) ಸಂಗಮ ಮತ್ತು ಮಾರಮ್ಮನಿಗೆ, ಹರಿಹರ, ಬುಕ್ಕನಾಯಕ, ಕಂಪಣ್ಣ, ಮಾರಪ್ಪ ಮತ್ತು ಮುದ್ದಪ್ಪ ಎಂಬ ಐವರು ಮಕ್ಕಳಿದ್ದರು, ಸಂಗಮನ ಮೂಲವನ್ನು ಕೆಲವು ವಿದ್ವಾಂಸರು, ಯಾದವಂಶನೆಂದು, ಬಿಕೌನಿಯ ಪ್ರಕಾರ ವಾರಂಗಲ್ಲಿನ ಕನ್ನನಾಯಕನಿಗೆ ಸಂಭಂದಗಳೆಂದು ತಿಳಿಸಿದ್ದಾರೆ.”[೮೯] ಮತ್ತು ವಿಜಯನಗರದ ಚಾರಿತ್ರಿಕತೆಯು ಪ್ರಪಂಚದ ಅದ್ಭುತವಾದ ವಿಜಯನಗರದ ಸಾಮ್ರಾಜ್ಯದ ಕಿಷ್ಕಿಂದದ ಆನೆಗುಂದಿ ನೆಲೆಯ ಐತಿಹಾಸಿಕಗಳು ವಿರೂಪಾಕ್ಷಿಯ ದೇವಾಲಯದ ಅನೇಕ ಗಾಯತ್ರಿ ಪೀಠ, ವೈಷ್ಣವ ದೇವಾಲಯವು, ಉಗ್ರ ನರಸಿಂಹ, ಸಾಸಿವೆ ಕಾಳು ಗಣಪ, ಕಡಲೆಕಾಳು ಗಣಪ, ಕೃಷ್ಣ ದೇವಾಲಯ, ಕಮಲ್ ಮಹಲ್, ಹಜಾರಾಮ ದೇವಾಲಯ, ಮಹಾನವಮಿದಿಬ್ಬ, ಉದ್ದಾನವೀರಭದ್ರ, ಆಂಜನೇಯ ಪರ್ವತ, ವಿಜಯ ವಿಠಲ ದೇವಾಲಯಗಳು, ಆನೆ ಸಾಲು, ಸೂಳೆ ಬಜಾರು, ಮಾತಂಗಿ ಪರ್ವತ, ಅಕ್ಕತಂಗಿಯವರು ಹಾಗೇಯೆ ಆಗಿನ ಅರಸರು ಕಲೆಗೆ, ಸಂಗೀತಕ್ಕೆ, ಸಾಹಿತ್ಯಕ್ಕೆ, ಶಿಲ್ಪಕಲೆಗೆ ಮತ್ತು ಚಿತ್ರಕಲೆಗಳು ಹಾಗೂ ಶಾಸನದ ಲೇಖನದ ಉಲ್ಲೇಖದ. ಇತಿಹಾಸ, ರಾಜಕೀಯ, ಧಾರ್ಮಿಕ ನೆಲೆಗಳು ಇವುಗಳೆಲ್ಲವನ್ನೊಳಗೊಂಡ, ವಿಜಯನಗರದ ಕಲ್ಲಿನ ರಥ, ಅನೇಕ ಜಾನಪದೀಯ ಕಥೆಗಳನ್ನು ದೇಶಿ–ವಿದೇಶಿಯವರು ಬಂದು ಹೋಗುವ ಪವಿತ್ರವಾದ ರಾಮಾಯಣ, ಮಹಾಭಾರತದ ಹಿನ್ನಲೆಯ ನೆಲೆಗಳಾಗಿವೆ.

ಈ ಗ್ರಂಥದ ಹಿನ್ನಲೆಯ ವಿಜಯನಗರಕಾಲದ ಸಂಸ್ಕೃತಿಯು ಜನಸಾಮಾನ್ಯರಿಗೆ ಅನುಕೂಲಕರವಾದ ಬೇಟೆ, ಪಶುಪಾಲನೆ, ಮತ್ತು ಕೃಷಿಯನ್ನು ಅವಲಂಬಿತವಾದ ವಿಜಯನಗರ ಸಾಮ್ರಾಜ್ಯದ ಒಂದು ಗ್ರಂಥವಾಗಿದೆ. ಜೀವನಕ್ಕೆ ಅತ್ಯಾವಶ್ಯಕವಾದ ಪುಸ್ತಕದ ವಿನ್ಯಾಸದ ಮಾಲೆಯಾಗಿದೆ. ಹಂಪಿಯ ಇತಿಹಾಸದ ಹಿನ್ನಲೆಯ ಪುರಾಣಗಳ ಬೆಳವಣಿಗೆಗೆ ಅನೇಕ ಋಷಿಮುನಿಗಳ ತಪಸ್ಸುಗಳನ್ನು ಗೈದ

ಶತಮಾನ ನೆನಪುಗಳನ್ನು ಹೊರಹಾಕುವ ಪೌರಾಣಿಕ(ಪುರಾಣ)ಗಳ ಹಿಂದಿನ ಚರಿತ್ರೆಯೇ ವಿಜಯನಗರದ ಸವಿನೆನಪುಗಳು ಮರೆ ಮಾಚಿ ಹೋಗಿವೆ. ಧಾರ್ಮಿಕತೆಯು ಬೆಳೆಯಲು ಇತಿಹಾಸದ ಹಿನ್ನಲೆಯ ಆಧಾರಗಳು, ಶಾಸನಗಳು, ಸಾಹಿತ್ಯ, ಕಲೆ, ಸಂಸ್ಕೃತಿ, ಚಿತ್ರ ರಚನೆಯು, ಲಾಂಛನಗಳು, ವಿಜಯನಗರ ಶೈವ ಶಿಲ್ಪಗಳು, ಗಾರೆ ಶಿಲ್ಪಗಳು ಮತ್ತು ವೈಷ್ಣವರ ಧಾರ್ಮಿಕ ಶಿಲ್ಪಕಲೆಗಳು ಜನಸಾಮಾನ್ಯರಲ್ಲಿ ಮನೆ ಮಾತಾಗಿವೆ. ಸಾಮಾಜಿಕ ಜೀವನದ ಕಲೆಗಳು, ಸಂಗೀತ, ಸಾಹಿತ್ಯ, ಚಿತ್ರಕಲೆ, ಜಂಗ್ಲಿ (ಕುಸ್ತಿ), ಹಾಗೂ ಐತಿಹ್ಯಗಳು ವಿಜಯನಗರದ ಪೌರಾಣಿಕ(ಪುರಾಣ)ಗಳ ಇತಿಹಾಸವೇ ಸೃಷ್ಟಿಸುವ ಸಾಮಾಜಿಕ ಜೀವನದ ನೆಲೆಗಳಾಗಿವೆ. ಪುರಾಣಗಳ ನಡೆದ ಹಂಪಿಯ "ಶೈವ ದೇವಾಲಯಗಳಲ್ಲಿಯೂ ಸಹ ಶಿವಪುರಾಣ, ಶಿವ ಕಥೆಗಳ ವಿಚಾರಗಳು ಜನಸಾಮಾನ್ಯರಲ್ಲಿ ಶಿವಭಕ್ತಿ ಶೈವ ಧರ್ಮದ ಅವಲಂಬನೆಯ ಬಗೆಗೆ ವಿವರಗಳು ದೊರಕುತ್ತವೆ. ಉದಾ: ಜನಪದ ಶಿವನ ಕಥೆಗಳು ಅಥವಾ ಶಿವಪುರಾಣಗಳಾದ ಭಕ್ತ ಮಾರ್ಕಂಡಯ್ಯನ, ಬೇಡರ ಕಣ್ಣಪ್ಪ ಇತ್ಯಾದಿಗಳಾಗಿವೆ."[೫೧]

ಇವುಗಳ ಕಥೆಗಳು, ಜನಪದ ಕಥೆಗಳು, ಉಬ್ಬು ಶಿಲ್ಪಗಳು, ದೇವಾಲಯವು, ಧರ್ಮ ಪ್ರಚಾರ ಹಾಗೂ ಅದರ ಬೆಳವಣಿಗೆಯ ದಿಕ್ಕಿನಲ್ಲಿ ಮಹತ್ವದ ಪಾತ್ರ ವಹಿಸುತ್ತಿದ್ದವು.

**ಪುರಾಣ**

"ಹಂಪಿ ಪುರಾಣ ಕಾಲದಲ್ಲಿ "ಪಂಪಾ ಕ್ಷೇತ್ರ"ವೆಂದು ಪ್ರಸಿದ್ಧಿ. "ಪಂಪಾ" ಎನ್ನುವುದು ತುಂಗಾಭದ್ರೆಯ ಇನ್ನೊಂದು ಹೆಸರು ಈ ಪಂಪಾ (ಪಂ.ಪ.ಆ) ಪಂ. ಎಂದರೆ ಮೋಕ್ಷವನ್ನು ಕೊಡುವಳು, ಪ. ಎಂದರೆ ಆಶ್ರಿತರನ್ನು ಕಾಪಾಡುವಳು, ಆ. ಎಂದರೆ ಸಂಪದ್ಭರಿತಳೆಂದು ಶಾಬ್ದಿಕ ಅರ್ಥದಲ್ಲಿ ವಿಶ್ಲೇಷಣೆ ಮಾಡಿರುವುದನ್ನು ಇಲ್ಲಿ ನಾವು ಕಾಣುತ್ತೇವೆ."[೫೧]

ಇಲ್ಲಿ ವಿಜಯನಗರ ಸಾಮ್ರಾಜ್ಯದ ಆಚರಣೆಯು ಮತ್ತು ಪುರಾಣಗಳನ್ನು ಆಗಿನ ಧಾರ್ಮಿಕತೆಯನ್ನು ವಿಶೇಷವಾಗಿ ನಡೆದು ಬಂದ ಸಂಗತಿಯಾಗಿದೆ.

ವಿರೂಪಾಕ್ಷಪ್ತ ವಿಶ್ವೇಶ್ವ : ತುಂಗಾಭದ್ರಾ ಜಾಹ್ನವಿ

"ಪಂಪಾಕಾಶೀ ಸಮಾದಿನ್ಯಾ ಭುಕ್ತಿ, ಮುಕ್ತಿ, ಪ್ರದಾಯ ನೀ" ಎಂದು ಉದ್ಗರಿಸಿರುವುದನ್ನು ಪುರಾಣದಲ್ಲಿ ಕಾಣುತ್ತೇವೆ. ಮತ್ತು ಈ ಋಷಿ ಸಪ್ತ ವೇದಾಂತಗಳ ಗಹನೆ, ತತ್ವಗಳಸರಳ ಭಾಷೆಯ ಅಭಿವ್ಯಕ್ತಿಯ ಪುರಾಣ ಎಂಬ ದಾರ್ಮಿಕ ಪರಂಪರೆಯ ನೆಲೆಗೆ ನಾಂದಿಯಾಯಿತು. ಈ ವೈದಿಕ ಪುರಾಣಗಳು ವೇದಾ ಗಮನಗಳಷ್ಟೇ ಮಾನ್ಯತೆಯನ್ನು ಹೊಂದಿದವುಗಳಾಗಿರುತ್ತವೆ. ವೈದಿಕ ಪುರಾಣ ಕೃತಕ ವ್ಯಾಪಾರವೆಂಬಾದಾಗಿದೆ, ಇಂಥ ಪುರಾಣಗಳು ಒಟ್ಟು ೧೮ ಎಂದು ಗುರುತಿಸಲಾಗಿರುತ್ತದೆ. ಈ ಪುರಾಣಗಳು ಬ್ರಹ್ಮ, ವಿಷ್ಣು, ಶಿವ ಮತ್ತು ವಿಷ್ಣುವಿನ ದಶಾವತಾರಗಳಲ್ಲದೆ ಅಗ್ನಿ, ವಾಯು, ಸೂರ್ಯ ಆದೇಶ ಧಾರ್ಮಿಕತೆಯ ಬೆಳವಣಗೆಗೆ ಪುರಾಣಗಳು, ಕಥೆಗಳು, ಸಾಹಿತ್ಯಗಳು

ಅತ್ಯವಶ್ಯಕವಾಗಿರುತ್ತದೆ. ಋಷಿ ಮುನಿಗಳ ತಪಸ್ಸುಗಳು ಜನಸಾಮಾನ್ಯರ ಜೀವನದಲ್ಲಿ ಜೀವಿಸುವುದಕ್ಕೆ ಧಾರ್ಮಿಕತೆಯನ್ನು ಬೆಳವಣಿಗೆಗೆ ಪ್ರತೀಕದ ನೆಲೆಯಾಗಿರುತ್ತದೆ. ಆಧ್ಯಾತ್ಮಿಕ ಹಾಗೂ ದಾರ್ಶನಿಕ ಸತ್ಯಗಳು ಕಥೆ, ವ್ಯಾಖ್ಯಾನ, ಸಂಕೇತ, ಆತ್ಮಕಥೆ, ಪವಾಡ, ದುಷ್ಟಾಂತರಗಳ ಮೂಲಕ ಜನಸಾಮಾನ್ಯರಿಗೆ ತಿಳಿಯಪಡಿಸುವುದೇ ಈ ಪುರಾಣಗಳ ಗುರಿಯಾಗಿರುತ್ತದೆ.

"ಪುರಾಣಗಳ ಮುಂದೆ ಭಾರತೀಯ ಸಾಹಿತ್ಯದಲ್ಲಿ ಪ್ರಮುಖ ಸ್ಥಾನ ಪಡೆಯುತ್ತವೆ. ಹಾಗೇಯೆ ಜೈನ, ಭೌದ್ದ, ವೀರಶೈವ ಪುರಾಣಗಳು ರಚನೆಯಾಗಿ ಪುರಾಣ ಸಾಹಿತ್ಯದ ಸಂಪದ್ಭರಿತವಾಗದ ಹಂಪಿಯ ಕ್ಷೇತ್ರದ ಪುರಾಣಗಳ ನೈತಿಕತೆಯ ಜನಸಾಮಾನ್ಯರಲ್ಲಿ ಮನೆ ಮಾತಾಗಿದೆ. ಪುರಾಣಗಳ ವಾಸ್ತು, ಸ್ಥಳ, ಶೈಲಿ, ತಂತ್ರಗಳ ರೂಪ ರೇಖೆಗಳ ಬೇರೆ ಬೇರೆಯಾದರೂ ಎಲ್ಲಾ ದಾರ್ಮಿಕ ಪುರಾಣಗಳ ಅಂತಃ ಸತ್ವ ಹಾಗೂ ತತ್ವ ಒಂದೇ ಆಗಿರುತ್ತದೆ."[೫೨] ಭಾರತೀಯ ಮಹೋನ್ನತಿ ಸಂಸ್ಕೃತಿಯ ನೆಲೆ ಮತ್ತು ಹಿನ್ನಲೆಯ ತತ್ವವಾಗಿರುತ್ತದೆ. ಮತ್ತು ಇವುಗಳ ಧಾರ್ಮಿಕ ಸಂಪ್ರದಾಯ ಸಂಸ್ಕೃತಿ ಪರಂಪರೆಯ ಜೀವನ ಮೌಲ್ಯಗಳನ್ನು ಕಾಣಬಹುದು, ಇದರ ಜೊತೆಗೆ ಪಂಪಾಕ್ಷೇತ್ರದ ಹಿನ್ನಲೆಯನ್ನು ಹರಿಹರನ ಗಿರಿಜ ಕಲ್ಯಾಣ, ಕುಮಾರ ಲಕ್ಷ್ಮಣ ದಂಡೇಶನ ಶಿವತತ್ವ ಚಿಂತಾಮಣಿ ಇಂತಹ ಪುರಾಣಗಳಿಂದ ಪಂಪಾಕ್ಷೇತ್ರದ ಸ್ಥಳ ಪುರಾಣದ ಅರಿಯಲು ಸಹಕಾರಿಯಾಗಿದೆ. "ಪಂಪಾಕ್ಷೇತ್ರದಲ್ಲಿ ವಿರೂಪಾಕ್ಷನು ನೆಲೆಯಾಗಿ ನಿಂತು ೩೦೦ ಕೃತಕ ಯುಗಗಳು ಕಳೆದೆವೆಂಬ ಅಂಶವನ್ನು ಸ್ಕಂದ ಪುರಾಣದ ಪಂಪಾ ಮಹಾತ್ಮೆಯಲ್ಲಿ ಉಲ್ಲೇಖಿಸಲಾಗಿದೆ. ತ್ರೇತಾಯುಗದಲ್ಲಿ "ಕಿಷ್ಕಿಂದಿ ಪಟ್ಟಣ" ಎಂಬ ಹೆಸರಿನಿಂದ ಈ ಕ್ಷೇತ್ರ ಪ್ರಸಿದ್ದಿ ಹೊಂದಿರುವುದನ್ನು ಶ್ರೀ ವಾಲ್ಮಿಕಿ ವಿರಚಿತ ರಾಮಾಯಣದಲ್ಲಿ ಕಿಷ್ಕಿಂದ ಬಂಡೆಯಲ್ಲಿ ವರ್ಣನೆಯನ್ನು ಕಾಣುತ್ತೇವೆ."[೫೩]

ಈ ವಿಜಯನಗರದ ನೆಲೆಯದ ಚಾರಿತ್ರಿಕ, ಪೌರಾಣಿಕವು ಮತ್ತು ಪುರಾಣಗಳನ್ನೊಳಗೊಂಡ ಪಂಪಾಕ್ಷೇತ್ರದ ಧಾರ್ಮಿಕತೆಯ ಪ್ರಚಾರಗಳಾಗಿ ಇತಿಹಾಸದ ತಿರುಳನ್ನು ಮರೆಯದೆ ಇರುವ ಹಂಪಿಕ್ಷೇತ್ರದ ಸಂಗಾತಿಯ ಪುರಾಣಗಳು ಜನಸಾಮಾನ್ಯರಲ್ಲಿ ಮರೆಯಲಾರದೇ ಇತಿಹಾಸವಾಗಿದೆ. ಒಟ್ಟಾರೆ ಪುರಾಣಗಳ ಹಿನ್ನಲೆಯಾಗಿ ಈ ಪಂಪಾಕ್ಷೇತ್ರದ ಆರಾಧ್ಯ ದೈವನಾದ ವಿರೂಪಾಕ್ಷನನ್ನು ವರಿಸಲು ಬ್ರಹ್ಮನು ಮಾಡದ ಪ್ರತ್ನಿಯಾಜ್ಞ ಪಂಪಾ (ಪಾರ್ವತಿ) ಘೋರವಾದ ತಪಸ್ಸನ್ನು ಆಚರಿಸಿ ಶಿವನನ್ನು ಒಲಿಸಿಕೊಂಡು ಕಲ್ಯಾಣೋತ್ಸವ ನಡೆದ ಸ್ಥಳ ಇದಾಗಿದೆ.

ಪುರಾಣದಲ್ಲಿ ಉಲ್ಲೇಖಿಸಿದಂತೆ, ಮಾತಂಗ, ಋಷ್ಯಮೂಕ, ಕಿಷ್ಕಿಂದ ಅಂಜನಾದ್ರಿ, ಹೇಮಕೂಟ, ವಿಪ್ರಕೂಟ, ಗಂಧರ್ವಗಿರಿ, ಜಂಬುನಾಥಗಿರಿ, ಬಾಣ ಭದ್ರೇಶ್ವರಪರ್ವತ, ಸೋಮ ಪರ್ವತ ಮುಂತಾದ ಪರ್ವತಗಳು ಮನ್ಮಥತೀರ್ಥ, ಲೋಕಾ ಪಾವನ ತೀರ್ಥ (ಮಲಯಾನಿ) (ಬ್ರಹ್ಮನ ವಾಸಸ್ಥಾನ), ಚಕ್ರತೀರ್ಥ, ಪಂಪಾ ತೀರ್ಥ ಮುಂತಾದ ತೀರ್ಥಗಳು ಪುರಾಣಗಳಲ್ಲಿ ಉಲ್ಲೇಖಿತವಾದ. ಪವಿತ್ರ ಸ್ಥಳಗಳು ಪಂಪಾಂಬಿಕೆಯ ಪ್ರಭಾವಕ್ಕೆ ಮುಚ್ಚಿ ಪರಶಿವನು ಶ್ರೀ ವಿರೂಪಾಕ್ಷ ನಾಮದಿಂದ ಅವಿರ್ಭವಿಸಿ

ಪಂಪಾಂಬಿಕೆ (ಪಾರ್ವತಿ)ಯೊಂದಿಗೆ ಕಲ್ಯಾಣೋತ್ಸವ ನಡೆದು ಪತ್ನಿ ಸಮೇತವಾಗಿ ಶಿವಗಣ, ವಿಷ್ಣುಗಣ, ಬ್ರಹ್ಮಗಣ, ದೇವತಾ ಸಮೂಹದೊಂದಿಗೆ ಈ ಕ್ಷೇತ್ರದಲ್ಲಿ ನೆಲೆಯಾಗಿರುವುದು, ಈ ಪಂಪಾ ಕ್ಷೇತ್ರಕ್ಕೆ ಧಾರ್ಮಿಕವಾಗಿ ಅತ್ಯಂತ ಮಹತ್ವ ಪಡೆದಿದೆ.

## ೪.೬. ಯುದ್ಧ

### ಪ್ರಾಕೃತಿಕ ಪರಿಸರ

ಪ್ರಾಕೃತಿಕ ಮತ್ತು ಯುದ್ಧತಂತ್ರಗಳಿಗೆ ಅನುಗುಣವಾಗಿ ಸೈನ್ಯ ಮತ್ತು ಅದರ ಆಡಳಿತ ಕ್ರಮಗಳು ಪ್ರಾಚೀನ ಕಾಲದಿಂದಲೂ ಬದಲಾವಣೆಗೊಂಡಿರುವುದನ್ನು ಚಾರಿತ್ರಿಕ ಸಂಗತಿಗಳಲ್ಲಿ ಕಾಣಬಹುದು. ಒಂದು ರಾಜ್ಯ ಅಥವಾ ಪ್ರದೇಶದ ಚರಿತ್ರೆಯು ಹೆಚ್ಚು ಅವಲಂಬಿತವಾಗಿರುವುದು ವಿಜಯನಗರದ ಭೌಗೋಳಿಕ ಪರಿಸರದ ಮೇಲೆ ಎಂಬುದಂತೂ ಸುಸ್ಪಷ್ಟ.ಸೈನ್ಯ ವ್ಯವಸ್ಥೆ ಮತ್ತು ಯುದ್ದಗಳಿಗೆ ಭೂ ಭಾಗವೂ ಬಹಳ ಮುಖ್ಯವೆಂಬುದನ್ನು ಹಲವು ವಿದ್ವಾಂಸರ ಅಭಿಪ್ರಾಯವಾಗಿರುತ್ತದೆ. ಈ ಭೂಭಾಗದ ಪರಿಸರವು ವಿಜಯನಗರ ಸಾಮ್ರಾಜ್ಯದ ಮಣ್ಣಿನ ಗುಣ, ನೆಲದ ಸ್ವರೂಪ, ಕಾಡು, ನದಿ, ತಗ್ಗು ದಿನ್ನೆ, ಅಂಕುಡೊಂಕು, ಮಾರ್ಗಗಳು ಹಾಗೂ ರಾಜ್ಯಗಳ ನಡುವಿನ ಅಂತರಗಳನ್ನು ಸೈನಿಕ ಕಾರ್ಯಚರಣೆಯಲ್ಲಿ ನಿರ್ಧರಿಸುವ ಅಂಶಗಳಾಗಿದ್ದವು. ಮತ್ತು ಭೂಭಾಗದ ಸ್ವರೂಪ, ಅನುಕೂಲಕರ ವಾತಾವರಣವು ರಾಷ್ಟ್ರರಕ್ಷಣೆಯ ದೃಷ್ಟಿಯಿಂದ ಪ್ರಮುಖವಾದುದ್ದು ಅಲ್ಲಿನ ಬೆಟ್ಟ ಗುಡ್ಡ ಅಥವಾ ದಟ್ಟವಾದ ಕಾಡುಗಳಿಂದ ಸ್ಥಳವು ರಾಜ್ಯ ರಚನೆಗೆ ಅತ್ಯಂತ ಉಪಯುಕ್ತ ವಾದುದ್ದು, ಕೋಟೆ ಕೊತ್ತಲುಗಳು ಕರ್ನಾಟಕದಾದ್ಯಂತ ನಿರ್ಮಾಣಗೊಂಡಿರುವುದನ್ನು ಇಲ್ಲಿ ಗಮನಿಸಬಹುದಾಗಿದೆ. ವಿಜಯ ನಗರ ಹಾಗೂ ಅದರ ಕೋಟೆಕೊತ್ತಲುಗಳನ್ನು ಕಂಡ ಅಂದಿನ ಸಮಕಾಲೀನ ವಿದೇಶಿ ಪ್ರವಾಸಿಗರು ತಮ್ಮ ವರದಿಗಳಲ್ಲಿ ಮನದಣಿಯ ವರ್ಣಿಸಿದ್ದಾರೆ. ಕ್ರಿ. ಶ. ೧೪೪೨ರಲ್ಲಿ ೨ನೇ ದೇವರಾಯನ ಆಸ್ಥಾನಕ್ಕೆ ಬೇಟಿ ನೀಡಿದ್ದ ಅಬ್ದುಲ್ ರಜಾಕನು ವಿಜಯನಗರದಂಥ ನಗರವನ್ನು ಕಣ್ಣು ಕಂಡಿಲ್ಲ ಕಿವಿ ಕೇಳಿಲ್ಲ ಈ ನಗರವನ್ನು ಹೇಗೆ ನಿರ್ಮಿಸಿದ್ದಾರೆಂದರೆ, ಏಳು ದುರ್ಗಗಳು ಏಳು ಕೋಟೆಗಳು ಒಂದನ್ನೊಂದು ವಿಷಯಗಳನ್ನು ನುಡಿಯುತ್ತಿರುವುದು ವಿಜಯನಗರ ದೊಡ್ಡ ದೊಡ್ಡ ನಗರಗಳ ಕೋಟೆಗಳು ಕಂದಕಗಳಿದ್ದುದನ್ನು ಸ್ಪಷ್ಟಪಡಿಸುತ್ತಾರೆ. ಬಾಭೂನಸಾ ಪ್ರಾಕೃತಿಕವಾದ ಅಂಶಗಳನ್ನು ನೋಡಲಾಗಿದ್ದು, ವಿಜಯನಗರದಲ್ಲಿ ಅಸಂಖ್ಯಾತ ಜನ ವಾಸಮಾಡುತ್ತಾರೆ. ಮತ್ತು ಅಲ್ಲಿ ಜೀವನವನ್ನು ಜೀವಿಸುತ್ತಾರೆಂದು ತಿಳಿದು ಬಂದ ಸಂಗತಿಯಾಗಿದೆ. ವಿಜಯನಗರದ ನೈಜ ಚಿತ್ರಣವನ್ನು ನೋಡಬಹುದಾಗಿದೆ. ಕಲೆ, ಸಂಪತ್ತು, ಸಾಹಿತ್ಯ, ಸಂಗೀತ, ಸ್ತಬ್ದಚಿತ್ರಣವು ಅನೇಕ ಶಿಲ್ಪಕಲೆಯು ಗಾರೆ ಶಿಲ್ಪವು ವಿಜಯನಗರದಾಧಾರಿತ ಸಂಗತಿಯ ಇತಿಹಾಸದಲ್ಲಿ ಬೃಹತ್ ಪ್ರಮಾಣದಲ್ಲಿ ಬೆಳೆದು ಬಂದ ಐತಿಹ್ಯಗಳ ನೆಲೆಯಾಗಿದೆ. ಇದು ಪ್ರಾಕೃತಿಕ ಪರಿಸರದ ಯುದ್ದಗಳ ಬಳಕೆಯ ಪರಿಸರವಾಗಿದೆ.

**ಯುದ್ಧ**

ದಕ್ಷಿಣಭಾರತ ಮಧ್ಯಯುಗೀನ ಚರಿತ್ರೆಯಲ್ಲಿ ಪರಿಣಾಮಕಾರಿಯಾಗಿ ಆಳ್ವಿಕೆ ನಡೆಸಿದ ಸಾಮ್ರಾಜ್ಯ ವಿಜಯನಗರವಾಗಿದೆ. ಇದು ತನ್ನ ಆರಂಭದಿಂದ ಅವನತಿಯವರೆಗೆ ಒಂದಲ್ಲ ಒಂದು ರೀತಿಯ ಪ್ರತಿರೋಧವನ್ನು ಎದುರಿಸುತ್ತಲೇ ಬಂದಿತು. "ಈ ಯುದ್ದದ ಅವಧಿಯಲ್ಲಿ ಯುದ್ದ, ಕದನ, ದಂಗೆ, ಕಾಳಗ, ಸಂಘರ್ಷಗಳು  ಅನಿವಾರ್ಯವಾಗಿರುತ್ತದೆ. ಯುದ್ದಗಳಿಗೆ ಅಂದು ಸೈನಿಕರು ಜನರನ್ನು ಸೇರುವಂತೆ ಮಾಡಲು ಪ್ರೇರೇಪಿಸುವ ಹುರಿದುಂಬಿಸುವಂತಹ ಯತ್ನಗಳನ್ನು ಆಯಾ ಕಾಲದ ಅರಸರು ಮಾಡಬೇಕಾಗಿದ್ದಿತ್ತು."[೫೪] ಯುದ್ದದ ಆಶ್ರಯವನ್ನು ಜನರಲ್ಲಿ ಮೂಡಿಸುತ್ತಿದ್ದವರು ಆಳುವ ವರ್ಗದವರೇ ಆಗಿದ್ದರು ಅವರು ತಮ್ಮ ರಕ್ಷಣೆ ಮತ್ತು ನೆರವಿಗಾಗಿ ಜನಸಾಮಾನ್ಯರನ್ನು ಅವಲಂಬಿಸಿದ್ದು. ನಿಜ ಆದರೆ ಇವರು ಸಮಾಜದಲ್ಲಿ ತಮ್ಮ ಆಶ್ರಯಗಳಿಗಾಗಿ ಜನರನ್ನು ರಾಜ್ಯ ಮತ್ತು ರಕ್ಷಣೆಯ ಹೆಸರಿನಲ್ಲಿ ಬಲಿಪಶುಗಳಾಗಿ ಮಾಡುತ್ತಿದ್ದುದನ್ನು ಕಾಣಬಹುದಾಗಿದೆ. ಅವುಗಳಿಗೆ ಲೌಕಿಕ, ಅಲೌಕಿಕ ಕಲ್ಪನೆಗಳನ್ನು ಸೃಷ್ಟಿಸಿ ಸೈನ್ಯಕ್ಕೆ ಯೋಧರು ಹೆಚ್ಚು ಹೆಚ್ಚು ಸೇರುವಂತೆ ಪ್ರೇರೇಪಿಸಿದ್ದುದುಂಟಾಯಿತು. ಇದು ಬಹು ಹಿಂದಿನಿಂದಲೂ ನಡೆದು ಬಂದ ಪದ್ದತಿಯಾಗಿದೆ.

ಭಗವದ್ಗೀತೆಯಲ್ಲಿ ಶ್ರೀ ಕೃಷ್ಣನು ಅರ್ಜುನನಿಗೆ ಯುದ್ದ ಮಾಡಲು ಪ್ರೇರೇಪಿಸಿದ ಬಗೆಯಿದು. "ಯುದ್ದದಲ್ಲಿ ಧರ್ಮವು ಅನೇಕ ಮುಖ ಧರ್ಮಾಚರಣೆಯಲ್ಲಿ ದಯೆಗೆ ಜಾಗವಿರುವಂತೆ ಗಟ್ಟಿ ಮನಸ್ಸಿಗೂ ಜಾಗವಿರುತ್ತದೆ."[೫೫] ಕರ್ಮವು ಪುರುಪಾಯತ್ತ ಫಲವೂ ದೈವಾಯತ್ತಾ ಕರ್ಮ (ಯುದ್ದ) ಮಾಡಿಯೂ ದೋಷವನ್ನು ಅಚಿಟಿಸಿಕೊಳ್ಳದಿರುವುದೇ ಕೌಶಲ್ಯ ಅಮಾನುಷಕ್ಕೆ ಒಳಗಾಗಬೇಡ ಹೃದಯ ದೌರ್ಬಲ್ಯಗಳನ್ನು ನೀಗಿ, ಎಚ್ಚೆತ್ತು, ಶತ್ರುಗಳನ್ನು ಸೆದೆಬಡೆ, ಯುದ್ದ ತಾನಾಗಿ ಬಂದುದ್ದು ಅದು ಪಾಪವಾಗಲಾರದು. ಯುದ್ದ ಮಾಡದೆ ಹೋದರೆ ಅದು ಪಾಪವಾಗುತ್ತದೆ. ಹಾಗೂ ಅಪಕೀರ್ತಿಗೆ ಒಳಗಾಗಬೇಕಾಗುತ್ತದೆ. ಎನ್ನುವ ಮಾತುಗಳಿಂದ ಯೋಧರನ್ನು ಧಾರ್ಮಿಕ ನಂಬಿಕೆಗಳಿಂದ ಹೇಗೆ ಪ್ರೇರೇಪಿಸುತ್ತದೆಂಬುದು ವ್ಯಕ್ತವಾಗುತ್ತದೆ.

ಯುದ್ದಕ್ಕೆ ಮುನ್ನ, ಯುದ್ದದ ಸಮಯ ಮತ್ತು ಯುದ್ದದ ನಂತರದಲ್ಲಿ ನೀಡುತ್ತಿದ್ದ ವೇಳೆಯ ಬಹುಮಾನ, ಬಿರುದು, ಬಾವಲಿ, ದಾನ, ದತ್ತಿಗಳು ಕೂಡ ಯುದ್ದ ಅಥವಾ ಹೋರಾಟಕ್ಕೆ ಪ್ರಚೋದಕ ಶಕ್ತಿಗಳಾದುದನ್ನು ಮರೆಮಾಚುವಂತಿಲ್ಲ. ವಿಜಯನಗರದ ಅರಸರು ಈ ಬಗೆಯ ನಿಯಮಗಳಿಗೆ ಹೊರತಾಗಿರಲಿಲ್ಲ ಅವರೂ ಕೂಡ ಇದೇ ಪದ್ದತಿಯನ್ನು ಮುಂದುವರೆಸಿದ್ದರು.

ವಿಜಯನಗರ ಸಾಮ್ರಜ್ಯದ ರಾಜಧಾನಿಯನ್ನು ಉಳಿಸುವುದಕ್ಕಾಗಿ ಬೆಳೆಸುವುದಕ್ಕಾಗಿ ಅಲ್ಲಿನ ಅರಸರು ನಿರಂತರವಾದ ಕಾರ್ಯಕ್ಕೊಳಗಾಗುತ್ತಿದ್ದರು. ಅನೇಕ ಸಾಮ್ರಾಜ್ಯದ ಮೇಲೆ ವಿದೇಶಿಯ ದಾಳಿಮಾಡಿ ಅಲ್ಲಿನ ಆಡಳಿತದ ಆಪ್ತವ್ಯವಸ್ಥೆಯು ಸ್ಥಗಿತ ಗೊಳಿಸಲು ಸದಾ ನಿರೀಕ್ಷೆಯಲ್ಲಿದ್ದರು. ಹಾಗೂ "ವಿಜಯನಗರ ಸಾಮ್ರಾಜ್ಯದ ರಕ್ಕಸತಂಗಡಗಿ ಯುದ್ದ, ರಾಮಾಯಣ ಅವನತಿಗೆ ಯುದ್ದ,

ಮಹಾಭಾರತ ಯುದ್ಧಗಳನ್ನೊಳಗೊಂಡ ಶ್ರೀ ಕೃಷ್ಣ ದೇವರಾಯನು ೫೦,೦೦೦ ಆನೆಗಳನ್ನು, ೨೫,೦೦೦ ಕುದುರೆಗಳು, ಸಾವಿರಾರು ಸೈನಿಕರನ್ನು ಯುದ್ಧಕ್ಕೆ ಉತ್ತೇಜನ ನೀಡಿವರು."[೫೬] ಅಥವಾ ಸಿದ್ಧಗೊಳಿಸುತ್ತಿದ್ದರು ಮತ್ತು ಸಾಹಿತಿಕಾರರು, ಕಲಾಕಾರರು, ಸಮಾಜ ಸುಧಾರಕರು, ವಿದ್ಯಾರಣ್ಯರು, ಹರಿಹರ, ಹಕ್ಕಬುಕ್ಕ, ವಿಜಯನಗರದ ನಾಲ್ಕು ಮನೆತನಗಳ ರಾಜರು ಪುರುಷರನ್ನು ಇಡೀ ಸಾಮ್ರಾಜ್ಯಕ್ಕೆ ದಿಟ್ಟ ಧೀರರಾಗಿ ನೆಲೆನಿಂತು ವಿಜಯನಗರ ಸಾಮ್ರಾಜ್ಯವನ್ನು ಉಳಿಸಿದ್ದಾರೆ. ನಂತರದ ೧೫೬೫ ರಲ್ಲಿ ನಡೆದ ರಕ್ಕಸಿತಂಗಡಿ ಯುದ್ಧದ ನಂತರ ವಿಜಯನಗರ ಸಾಮ್ರಾಜ್ಯವು ಅವನತಿ ಹಾದಿ ಇಡಿಯಿತು.

**ಅಶ್ವದಳ**

"ಪ್ರಾಚೀನ ಕರ್ನಾಟಕದ ಸೈನ್ಯ ವ್ಯವಸ್ಥೆಯಲ್ಲಿ ಕುದುರೆಗಿಂತ ಆನೆಯದು ಪ್ರಮುಖ ಸ್ಥಾನವಾಗಿದ್ದಿತ್ತು. ಯಾಕೆಂದರೆ ಇದು ಹೊಯ್ಸಳರ ಕಾಲದ ಹೊತ್ತಿಗೆ ಬದಲಾಗಿ ಆನೆಯ ಸ್ಥಾನವನ್ನು ಕುದುರೆಗಳು ಅಲಂಕರಿಸಿದವೆನ್ನಬಹುದು."[೫೭] ಇದಕ್ಕೆ ಮಹಮ್ಮದ್-ಬಿನ್-ತುಘಲಕ್ ಮತ್ತು ಅಲ್ಲಾ ವುದ್ದೀನ್ ಖಿಲ್ಜಿಯವರ ದಕ್ಷಿಣ ದಂಡಯಾತ್ರೆಗಳು ಕಾರಣವೆಂದೇ ಹೇಳಬೇಕಾಯಿತು. ಮುಸ್ಲಿಮರ ಪ್ರಭಾವದಿಂದ ಕರ್ನಾಟಕದ ಸೈನ್ಯದಲ್ಲಿ ಕುದುರೆಗಳು ಹೆಚ್ಚು ಪರಿಚಯವಾಯಿತು. "ಮಧ್ಯಯುಗದ ಯುದ್ಧ ವ್ಯವಸ್ಥೆಯಲ್ಲಿ ಕುದುರೆ ಅನಿವಾರ್ಯ ಅಂಗವಾಗಿದ್ದಿತ್ತು. ಅದು ಕರ್ನಾಟಕದ ಸೈನ್ಯದಲ್ಲಿ ಹೆಚ್ಚು ಹೆಚ್ಚು ಬಳಕೆಗೊಂಡದು ಹೊಯ್ಸಳರು, ಯಾದವರು ಮತ್ತು ಅನಂತರ ಬಂದ ಬಹುಮನಿ ಹಾಗೂ ವಿಜಯನಗರ ಕಾಲದಲ್ಲಿ ಹೊಯ್ಸಳರ ಕಾಲದಲ್ಲಿ ವಿದೇಶಗಳಿಂದ ಕುದುರೆಗಳನ್ನು ಆಮದು ಮಾಡಿಕೊಳ್ಳಲಾಗುತ್ತಿತ್ತು. ಅವುಗಳ ಸವಾರಿಯ ಶಿಕ್ಷಣ ನೀಡಲು ವಿಷ್ಣುವರ್ದನನು ಪ್ರತ್ಯೇಕ ಶಾಲೆಯನ್ನು ತೆರೆದಿದ್ದನು."[೫೮] ಕುದುರೆಗಳನ್ನು ಕೊಳ್ಳುವ ಮೊದಲು ಅದರ ಲಕ್ಷಣಗಳನ್ನು ಗುರುತಿಸುವಲ್ಲಿ ತುರಗ ಸಾಹಿಣಿಗಳ ಪಾತ್ರ ಅತ್ಯಂತ ಮಹತ್ವದಾಗಿತ್ತು. ವಿಜಯನಗರ ಯುದ್ಧದ ಪ್ರೇರಣೆಯು ಕುದುರೆಯು ಯಾವ ಯಾವ ಲಕ್ಷಣಗಳನ್ನು ಹೊಂದಿರ ಬೇಕೆಂಬುದನ್ನು ಶಿವತತ್ವ ರತ್ನಕಾಯು ಹೀಗೆ ಹೇಳಲಾಗಿದೆ. ಕುದುರೆಯು ಉದ್ದ ಕತ್ತು ಸೊಗಸಾದ ಪಕ್ಕೆ, ದೊಡ್ಡ ಕಣ್ಣು, ಸೊಂಟ, ಹೆಗಲು, ಬೆನ್ನು, ಎದೆ, ಹಣೆ, ವೃಷಣ, ಕಿವಿಗಳು ಚಿಕ್ಕದಾಗಿಯು ಗಟ್ಟಿಯಾಗಿ ಒತ್ತಿಯಾಗಿರುವ ಗೊರಸುಗಳು, ಕುದುರೆಯು ರಾಜರಿಗೆ ವಾಹನವಾಗಿರಬೇಕು. ಯುದ್ಧ ಕುದುರೆಗಳು ಆಯ್ಕೆ ಮಾಡುವಾಗಲೂ ಈ ಬಗೆಯ ಲಕ್ಷಣಗಳು ಹೊಂದಿರ ಬೇಕಾಗಿದೆ. ವಿಜಯನಗರ ಕಾಲದಲ್ಲಿ ಕಾಲ್ದಳದ ನಂತರದ ಸ್ಥಾನ ಅಶ್ವದಳದ್ದಾಗಿದೆ. ಈ ಅರಸರು ಅಶ್ವಪಡೆಯಲ್ಲಿ ವಿಶೇಷ ಅಸ್ಥಿತ್ವವಹಿಸಿದ್ದುದಲ್ಲದೇ ಪರಣಿಯನ್ನು ಪಡೆದಿದ್ದರು. ಅಶ್ವದಳದಲ್ಲಿ ವಿಶೇಷ ಪರಿಣಿತಿ ಹೊಂದಿದ್ದುದರಿಂದ ೨ನೇ ದೇವರಾಯ, ಕೃಷ್ಣದೇವರಾಯನು ಅಶ್ವಪತಿಗಳೆಂದೇ ಶಾಸನಗಳಲ್ಲಿ ಕಂಡುಬರುವುದು ಸಂಗತಿಯಾಗಿದೆ. ಮೌರ್ಯರ ಕಾಲದಿಂದಲೂ ಭಾರತದಲ್ಲಿ ಅಶ್ವದಳವು ಮುಖ್ಯ ಪಾತ್ರ ವಹಿಸಿದ್ದುದು ತಿಳಿದು ಬರುವ ಸಂಗತಿ "ಚಂದ್ರಗುಪ್ತ ಮೌರ್ಯನು ೨೦,೦೦೦ ಅಶ್ವದಳ ಮತ್ತು

೯,೦೦೦ ಗಜಗಳನ್ನು ಹೊಂದಿದ್ದನು. ಕರ್ನಾಟಕದಲ್ಲಿ ಕ್ರಿ.ಶ ೭ನೇ ಶತಮಾನದಲ್ಲಿ ಅಶ್ವಸೇನೆಯು ಅಸ್ಥಿತ್ವದಲ್ಲಿತ್ತು."[೫೯] ಯುದ್ದಗಳ ಸಂರಕ್ಷಣೆಯ ಬಳಕೆಗೆ ವಿಜಯನಗರ ಅರಸರು ಅತಿ ಹೆಚ್ಚಾಗಿ ಸೇನಾ ಬಲವನ್ನು ಅಶ್ವದಳದ ಬೃಪ್ರಮಾಣದಲ್ಲಿ ಸೇನಾ ಬಲವನ್ನು ಸಾಮ್ರಾಜ್ಯದಲ್ಲಿ ಕ್ರೂಢೀಕರಿಸಲಾಗಿತ್ತು. ಬಾದಾಮಿ ಚಾಲಿಕ್ಯರ ಐಹೊಳೆ ಶಾಸನವು ಮಂಗಳೇಶನ ಅಶ್ವ ಸೇನೆಯನ್ನು ಉಲ್ಲೇಖಿಸಿದೆ. "ಕೃಷ್ಣದೇವರಾಯ ತಾನು ಹೇಳಿದಂತೆ ಮಾಡಿಯೂ ತೋರಿಸಿದ್ದಾನೆ. ಅವನ ಮೂಲ ಸೈನ್ಯದಲ್ಲಿ ೩೫,೦೦೦ ಅಶ್ವದಳವಿದ್ದುದ್ದನ್ನು ಪಾಯೇಸ್ ಉಲ್ಲೇಖಿಸಿದರೆ ಬಾರ್ಬೋಸಾ ೨೦,೦೦೦ ಎಂದು, ನ್ಯೂನೀಜ್ ೩೨೬೦೦ ಎಂದು ಹೇಳಿರುವರು. ರಾಯಬಾಚಕಮು ಕೃಷ್ಣದೇವರಾಯನ ಜೀವನ ಸಾಧನೆಗಳಿಗೆ ಸಂಬಂಧಿಸಿದ್ದು ರಾಯನ ಸೈನ್ಯದಲ್ಲಿ ೬೦೦೦೦ ಕುದುರೆಗಳಿದ್ದುದನ್ನು ಸ್ಪಷ್ಟಪಡಿಸಲಾಗಿದೆ."[೬೦] ವಿಜಯನಗರ ಅಶ್ವದಳದಲ್ಲಿ ಯುದ್ದದ ಸಾಧನೆಗಾಗಿ ಶ್ರೀಕೃಷ್ಣದೇವರಾಯನು ತನ್ನ ದೈರ್ಯ ಸ್ಥೈರ್ಯಗಳಿಂದ ಸಾಮ್ರಾಜ್ಯ ಹೊಳಿತಿಗಾಗಿ ಜಿದ್ದು ಮಾಡಲಾಗಿತ್ತು. ಕೌಟಿಲ್ಯನು ಇಲ್ಲಿ ಸುದೀರ್ಘವಾಗಿ ವಿವರಿಸಿದ್ದಾನೆ. ಕುದುರೆಯು ಸೈನ್ಯವು ಶಿಬಿರವನ್ನು ಏರ್ಪಡಿಸುವ ಭೂಮಿಯಲ್ಲಿ ಗೂಢವಾಗಿರುವ ಶತ್ರು ಸೈನ್ಯವನ್ನು ಓಡಿಸುವ, ಸೈನ್ಯವು ಬೀಡು ಬಿಟ್ಟಲ್ಲಿ ಉಪದ್ರವವಿಲ್ಲದಂತೆ ಮಾಡುವ ದಾರಿಯಲ್ಲಿ ಸಿಕ್ಕು ಕಾಡಿನಲ್ಲಿ ಕಳ್ಳರನ್ನು ಓಡಿಸುವ ಕೆಲಸ ಮಾಡಬೇಕು ಶಿಬಿರಕ್ಕೆ ಪ್ರದೇಶವನ್ನು ಮೊದಲು ಆಕ್ರಮಿಸಿಕೊಳ್ಳುವುದು ಜಲಾಶಯಗಳನ್ನು ತಮಗನುಕೂಲವಾದ ಗಾಳಿಯುಳ್ಳ ಮತ್ತು ಎದುರಿಗೆ ಸೂರ್ಯರಶ್ಮಿ ಬೀಳಿದ ಪ್ರದೇಶವನ್ನು ಆಕ್ರಮಿಸುವುದು ಶತ್ರು ಸೈನಿಕರು ಪ್ರವೇಶಿಸದಂತೆ ನೋಡಿಕೊಳ್ಳುವುದು. ಯುದ್ಧವನ್ನು ಜಯಗೊಳಿಸಬೇಕಾದರೆ ಅರಸರು ತಮ್ಮದೇ ಆದ ಯೋಚನೆ ಜ್ಞಾನದ ನೆಲೆ ಸಾಮ್ರಾಜ್ಯ ಘನತೆಯು ಮತ್ತು ಆ ರಾಜಧಾನಿ ಮತ್ತು ಸಾಮ್ರಾಜ್ಯವನ್ನು ನಂಬಿಕೊಂಡಿರುವ ಸೈನಿಕರು ಸೇನಾದಳ, ಅಶ್ವದಳ, ಗಜದಳ ಆ ವ್ಯಾಪ್ತಿಯ ಸಂಬಂದಿಸಿದ ಆಡಳಿತಾತ್ಮಕರೀತಿಯು ಶತ್ರುಗಳನ್ನು ಸದೆಬಡಿದು ಸಾಮ್ರಾಜ್ಯದ ಘನತೆ ಗೌರವ ಕಾಪಾಡಿಕೊಳ್ಳುವುದೇ ಒಬ್ಬ ಅರಸನ ಜ್ಞಾನವಾಗಿರುತ್ತದೆ.

ಪೋರ್ಚುಗೀಸನ ಅಲ್ಬುಕರ್ಕನು ವಿಜಯನಗರದೊಂದಿಗೆ ಮಾಡಿಕೊಂಡ ವಾರ್ಷಿಕ ಒಪ್ಪಂದಕ್ಕೆ ಬರೆದ ಪತ್ರದಲ್ಲಿ "ರಾಯಕುದುರೆಗಳ ಪೂರೈಕೆಗಾಗಿ ಪ್ರತೀ ವರ್ಷ ೩೦೦೦೦ ಕ್ರೂಜೇಡೋಗಳನ್ನು ಕೊಡುವುದಾರೆ ಮತ್ತು ಕುದುರೆಗಳನ್ನು ತರಲು ಗೋವಾಕ್ಕೆ ತನ್ನದೇ ಆಳುಗಳನ್ನು ಕಳಿಸುವುದಾದರೆ ರಾಯನಿಗೆ ತನ್ನೆಲ್ಲಾ ಕುದುರೆಗಳನ್ನು ಕೊಳ್ಳುವ ಇಲ್ಲವೇ ಬಿಡುವ ಹಕ್ಕನ್ನು ನೀಡಲಾಗುವುದು."[೬೧] ಮತ್ತು ಬಿಜಾಪುರದ ಸುಲ್ತಾನನಿಗೂ ಪತ್ರ ಬರೆದಿದ್ದನೆಂದು ಹೇಳಲಾಗಿದೆ. ಒಂದನೇ ಬುಕ್ಕರಾಯನನ್ನು ಹೊನ್ನು ಕೊಟ್ಟು ಕುದುರೆಯ ಕೊಂಬ ಮಾಂಡಲಿಕರ ಗಂಡ ಎಂಬ ಬಿರುದುನಿಂದ ಕರೆದಿವೆ ಇದರಿಂದ ಅಂದು ಕುದುರೆಗಳಿಗೆ ವಿಶೇಷ ಬೇಡಿಕೆ ಇದ್ದು ಅರಸರು ಮಂಡಲೀಕರು ಹೊರ ರಾಜ್ಯಗಳಿಂದ ಕೊಂಡುಕೊಳ್ಳುತ್ತಿದ್ದುದು ಈ ಬಿರುದಿನಿಂದ ಸ್ಪಷ್ಟವಾಗಿದೆ.

**ಗಜದಳ**

ಪ್ರಾಣಿಗಳಲ್ಲಿ ಪ್ರತಿಷ್ಠಿತ ಹಾಗೂ ಗಾಂಭೀರ್ಯವುಳ್ಳ ಪ್ರಾಣಿ ಆನೆ ಇದು ಪ್ರಾಚೀನ ಕಾಲದಿಂದಲೂ ಸೈನ್ಯದಲ್ಲಿ ಪ್ರಧಾನ ಪಾತ್ರ ವಹಿಸಿದೆ. ಇದಕ್ಕೆ ಅದರ ಗಾತ್ರ ಬಲ ಹಾಗೂ ಮಂದತೆಗಳು ಮುಖ್ಯವೆನ್ನಬಹುದು. ರಾಮಾಯಣ ಮಹಾಭಾರತ ಕಾಲಗಳಿಂದಲೂ ಭಾರತದಲ್ಲಿ ಆನೆ ಚಿರಪರಿಚಿತ ಪ್ರಾಣಿ. ಮೂಲತಃ ಭಾರತವು ಆನೆಗಳ ವಾಸಸ್ಥಾನ ಕರ್ನಾಟಕದ ಆನೆಗಳ ತವರೂರು ಈ ಸೈನ್ಯದಲ್ಲಿ ಗಜದಳವು ಎಷ್ಟು ಅನಿವಾರ್ಯವಾಗಿರುತ್ತದೆ. ಆದರೆ ಭಾರತೀಯರೇ ಆನೆಗಳನ್ನು ಮೊಟ್ಟಮೊದಲಿಗೆ ಯುದ್ಧಗಳಲ್ಲಿ ಬಳಸಿದರೆಂಬುವುದು ವಿದ್ವಾಂಸರ ಅಭಿಮತ. ಅದರಲ್ಲೂ ವಿಜಯನಗರ ಅರಸರು ಗಜದಳಕ್ಕೆ ಪ್ರಾಧ್ಯಾನ್ಯತೆ ನೀಡಿದ್ದನ್ನು ಅವರ ಕಾಲದ ಗಜಬಲದಿಂದ ತಿಳಿದು ಬರುತ್ತದೆ. ವಿಜಯನಗರ ಅರಸರು ಸಾಕಷ್ಟು ಸಂಖ್ಯೆಯಲ್ಲಿ ಆನೆಗಳನ್ನು ಇಟ್ಟುಕೊಂಡಿದ್ದುದು ವಿವಿಧ ಆಕರಗಳಿಂದ ತಿಳಿದುಬರುವ ಸಂಗತಿ. "ರಜಾಕ್ ರವರು ವಿಜಯನಗರ ಸೇನೆಯಲ್ಲಿ ೧೦೦೦ ಆನೆಗಳಿದ್ದವೆಂದು, ವಾರ್ಥೆಮಾ ೪೦೦, ಬಾರ್ಲೋಸಾ ೯೦೦, ನ್ಯೂನಿಜ್ ರಾಯಚೂರು ಕಥನದಲ್ಲಿದ್ದ ಮೂಲ ಸೇನೆಯಲ್ಲಿ ೫೫೧ ಎಂದು, ಪ್ರಾಂತೀಯ ಪಡೆಗಳಲ್ಲಿ ೬೩೩ ಆನೆಗಳಿದ್ದುದನ್ನು ಉಲ್ಲೇಖಿಸಿದರು. ಕೃಷ್ಣರಾಜ ವಿಜಯಂ ನಲ್ಲಿ ೨೦೦೦ ಆನೆಗಳಿದ್ದುದಾಗಿದೆ."[೬೨] ವಿಜಯನಗರ ಸಾಮ್ರಾಜ್ಯದ ಆಡಳಿತದ ಕೆಲವು ಸೇನಾಬಲದ ಅತ್ಯಾವಶ್ಯಕವಾಗಿದೆ. ಇಂತಹ ಬಲಿಷ್ಠ ಬಲದಿಂದಿರುವ ವಿಜಯನಗರ ಸಾಮ್ರಾಜ್ಯಕ್ಕೆ ದೇಶಿಯ ಪ್ರವಾಸಿಗರ ನೋಟದಿಂದ ರಾಜದಾನಿಗೆ ಒಂದು ಉತ್ತಮವಾದ ಬೆಳಕಾಗಿರುತ್ತದೆ.

**ಫಿರಂಗಿದಳ**

ಫಿರಂಗಿ ದಳವು ಸಿಡಿಮದ್ದುಗಳನ್ನು ಒಳಗೊಂಡ ಎಲ್ಲಾ ಶಸ್ತ್ರಾಸ್ತ್ರಗಳನ್ನೊಳಗೊಂಡಿದೆ. ಇದರಲ್ಲಿ ಬಂದೂಕು, ತೋಪು ಅಥವಾ ಫಿರಂಗಿ ಮತ್ತಿತರ ಸಿಡಿಮದ್ದಿನ ಉಪಕರಣಗಳನ್ನು ಸೇರಿರುತ್ತವೆ. "ಸಿಡಿಮದ್ದಿನ ಬಳಕೆ ಕುರಿತು ನಡೆಸಿದಷ್ಟು ಚರ್ಚೆ ಸೈನಿಕ ವ್ಯವಸ್ಥೆಯ ಯಾವುದೇ ವಿಷಯದ ಮೇಲೆ ಬಹಳ ನಡೆದಿಲ್ಲವೆನ್ನುವುದು ಕೆಲವರ ವಿದ್ವಾಂಸರ ಹಲವು ರೀತಿಯ ಅಭಿಪ್ರಾಯಗಳನ್ನು ಹೇಳಿದ್ದಾರೆ."[೬೩] ಸೈನ್ಯದಳದಲ್ಲಿ ಯುದ್ದಗಳ ವ್ಯವಸ್ಥೆಯು ವಿಜಯನಗರ ಸಾಮಂತರ ನಡವಳಿಕೆಯು ದೇಶದಾಧ್ಯಂತ ಸಮವಿಷಯಗಳು ಕೆಲವು ಸಿಡಿಮದ್ದಿನ ಬಳಕೆಯ ಅತ್ಯಾವಶ್ಯಕವಾಗಿದೆ. ಗಿಬ್ಬನ್ ಎಂಬ ವಿದ್ವಾಂಸಕ ಕ್ರಿ.ಶ. ೮೩ ರಹೊತ್ತಿಗೆ ಫಿರಂಗಿಗಳನ್ನು ಚೀನಾದವರು ಬಳಕೆಗೆ ತಂದಿದ್ದಾರೆಂದು ಕೆಲವು ವಿದ್ವಾಂಸರ ಅಭಿಪ್ರಾಯವಾಗಿತ್ತು. ಸಾಮಾನ್ಯವಾಗಿ ಸಿಡಿಮದ್ದನ್ನು ತಯಾರಿಸಲು ಬಳಸುತ್ತಿದ್ದ ಗಂಧಕ ಇದ್ದಿಲು ಮತ್ತು ಪೆಟ್ಲುಪುಗಳನ್ನು ತಯಾರಿಸಲಾಗುತ್ತಿತ್ತು.

ಭಾರತೀಯರು ಪ್ರಾಚೀನ ಕಾಲದಲ್ಲೇ ಸಿಡಿಮದ್ದನ್ನು ಬಳಸಿದ್ದರು ಅದನ್ನು ಮಹಾಭಾರತ, ಮುದ್ರರಾಕ್ಷಸ ಹಾಗೂ ಅಗ್ನಿ ಪುರಾಣ ಮೊದಲಾದ ಸಂಸ್ಕೃತಿ ಕಾವ್ಯಗಳಲ್ಲಿ ಕಾಣಬಹುದೆಂಬ ಅಭಿಪ್ರಾಯವಾಗಿದೆ. ಸಿಡಿಮದ್ದಿನಗಳಾವು ಶತಘ್ನಿ, ಕನಪ, ಆಯರ್ಮಘ್ನಿ, ನರಚ, ಲೋಹಯಂತ್ರ,

ಕಾಲಚಕ್ರ, ಸರ್ವಘಾಟ, ವೀಧಿತಿ, ಸ್ವ ಲಿಂಗ, ಕದಿನಿ, ಹಾಗೂ ಕೌಟಿಲ್ಯನು ಹೇಳುವ "ಅಗ್ನಿಬಾಣ", ಕಾಮಂದಕ" ಇವುಗಳು ಸಿಡಿಮದ್ದಿನ ಯುದ್ದಗಳ ಸೇವೆಗಳನ್ನು ಬಳಕೆಯಾಗಿರುತ್ತವೆ. ವಿಜಯನಗರ ಸಾಮ್ರಾಜ್ಯದ ಆಧಾರದ ಪರಿಕಾರಗಳು ಯುದ್ದಕ್ಕೆ ಅವಶ್ಯಕವಾದ ಯುದ್ದದ ಉಪಕರಣಗಳು ನಿರಂತರದ ಸಮರಕ್ಕೆ ಆಧಾರಗಳ ವಸ್ತುಗಳಾಗಿದ್ದವು. ಫಿರಂಗಿಗಳು ಮೊಟ್ಟಮೊದಲ ಬಾರಿಗೆ ಚೀನಾದೇಶದಿಂದ ತಂದಿರುವ ಯುದ್ದದ ಫಿರಂಗಿಗಳಾಗಿದ್ದವು. ೧೫ ನೇ ಶತಮಾನದ ನಂತರದವು ಈ ಕಾವ್ಯಗಳು ವ್ಯಕ್ತಪಡಿಸುವ ಫಿರಂಗಿ ಗುಂಡುಗೋವಿ, ಮುದ್ದಿನ ಪಟ್ಟಣ, ಶತಘ್ನಿ, ಉಪ್ಪಿನತತ್ತಿ ಪೆಟಲು, ಕೈಗೋವಿ, ಮಾರಿಶತಗ್ನಿ, ತೋಪು ಇನ್ನು ಮುಂತಾದವುಗಳಾಗಿದೆ.

"ನ್ಯೂನೀಜ್ ನೀಡುವ ವಿವರವಂತೂ ಅಪಾರ ಕೃಷ್ಣದೇವರಾಯನು ಕೈಗೊಂಡ ರಾಯಚೂರು ದಂಡಯಾತ್ರೆಯಲ್ಲಿ ಕೈಗೊಂಡ ತನ್ನ ಬೃಹತ್ ಮೊತ್ತದ ಜೊತೆಗೆ ಫಿರಂಗಿಗಳಿದ್ದುವೆಂದು ಹೇಳಿದ್ದಾನೆ."[೬] ಬಹುಮನಿಯವರು ರಾಯಚೂರು ಕೋಟೆಯಲ್ಲಿ ೨೦೦ ಫಿರಂಗಿಗಳನ್ನು ಅಳವಡಿಸಿಕೊಂಡಿದ್ದರೆಂದೂ ಬಹುಮನಿಯ ಯೋಧರು ಫಿರಂಗಿಗಳಿಂದ ಗುಂಡುಗಳನ್ನು ಹಾರಿಸಿ ಮತ್ತು ಕೋವಿಗಳಿಂದ ಮದ್ದುಗಳನ್ನು ಹೊಡೆದು ಕೃಷ್ಣದೇವರಾಯನ ಅನೇಕ ಸೈನಿಕರನ್ನೂ ಆಹುತಿ ಕಳೆದುಕೊಂಡ ವಿಚಾರವನ್ನು ಪ್ರಸ್ತಾಪಿಸುತ್ತಾನೆ. ಮತ್ತು ಶ್ರೀ ಕೃಷ್ಣದೇವರಾಯನ ಕಾಲದಲ್ಲಿ ಇದುವರೆಗೆ ಬಳಕೆಯಿದ್ದ ಮದ್ದುಗುಂಡುಗಳು ಫಿರಂಗಿಗಳಿಗೆ ಬದಲಾಗಿ ಪೋರ್ಚುಗೀಸರ ನವೀನ ಮಾಧರಿಯ ಅಸ್ತ್ರಗಳು ಬಳಕೆಗೊಂಡದನ್ನು ಕಾಣಬಹುದು. ವಾಸ್ಕೋಡಿಗಾಮ ಭಾರತಕ್ಕೆ ಪೋರ್ಚ್‌ಗಲ್‌ನಿಂದ ೧೫ ದೊಡ್ಡ ಹಡಗುಗಳೊಂದಿಗೆ ಬಂದಿದ್ದನು. ಈ ಫಿರಂಗಿಗಳು ಹೊತ್ತು ಹಡಗುಗಳಾಗಿದ್ದವು.

ಕೃಷ್ಣದೇವರಾಯನ ಕಾಲದ ಫಿರಂಗಿದಳದ ಕಾರ್ಯವೈಖರಿಗಳಾದರೆ ರಕ್ಕಸಗಿ, ತಂಗಡಗಿ ಯುದ್ದದಲ್ಲಿದ್ದ ಫಿರಂಗಿಗಳು ಬಂದೂಕು, ಕೋವಿಗಳ ಸಂಖ್ಯೆಯಂತೂ ಅಪರಿಮಿತವಾಗಿದು. ಈ ಫಿರಂಗಿಗಳನ್ನು ಬಹಳ ಯುದ್ದಗಳಿಗೆ ಶಸ್ತ್ರಾಸ್ತ್ರದ ಫಿರಂಗಿಗಳು ಬೇಕಾಗಿವೆ. ಮತ್ತು ಕ್ರಿ.ಶ. ೧೫೪೯ ರಲ್ಲಿ ಹಸನ್ ರೂಮಿಯ ಮಗ ಮಹಮ್ಮದ್‌ನು ಅಹಮಾದ್ ನಗರದಲ್ಲಿ ತಯಾರಿಸಿದ್ದನೆಂದು ತಿಳಿದು ಬರುತ್ತದೆ. ಈ ಫಿರಂಗಿಗಳು ವಿಜಯನಗರ ಫತನಕ್ಕೆ ಕಾರಣವಾದ ರಕ್ಕಸಗಿ, ತಂಗಡಗಿ ಯುದ್ದದಲ್ಲಿ ಬಳಸಲಾಗಿದ್ದಿತು. ಹಾಗೂ ಸೈನ್ಯಕ್ಕೆ ಬೇಕಾದ ಶಿಬಿರ ಸಾಮಾಗ್ರಿಗಳು, ಆಹಾರ ವಸ್ತುಗಳು, ಶಸ್ತ್ರಾಸ್ತ್ರಗಳು ಇವೇ ಮೊದಲಾದವುಗಳನ್ನು ಸೈನ್ಯಕ್ಕೆ ಪೂರೈಸುವ ಸಾಗಾಣಿಕ ಸಾಧನಗಳಾಗಿದ್ದವು. ಒಂಟೆಗಳು ವಿಜಯನಗರದಲ್ಲಿ ಸಾಕಷ್ಟು ಸಂಖ್ಯೆಯಲ್ಲಿದ್ದವು. ೨ನೇ ದೇವರಾಯನು ತನ್ನ ಮಹಾ ಸೇನಾಪತಿಯಾದ ನಾಗಮ ನಾಯಕನನ್ನು ದಕ್ಷಿಣದ ದ್ವಿಗ್ವಿಜಯಕ್ಕೆಂದು ಕಳುಹಿಸಿದಾಗ ಅವನೊಂದಿಗೆ ಇದ್ದ ಸೈನ್ಯದಲ್ಲಿ ೧೦,೦೦೦ ಒಂಟೆಗಳಿದ್ದವೆಂದು ತಿಳಿದು ಬರುತ್ತದೆ. ಹಾಗೂ ಒಂಟೆಗಳನ್ನು ವಿಜಯನಗರದ ಸ್ಮಾರಕಗಳಲ್ಲಿ ಕಾಣಬಹುದಾಗಿದೆ.

ಪ್ರಸ್ತುತ ಅಧ್ಯಯನದ ದೃಷ್ಟಿಯಿಂದ ವಿಜಯನಗರದ ಸೇವೆಯನ್ನು ಈ ಕೆಳಗೆ ಗಮನಿಸ ಬೇಕಾಗುವ ಸಂಗತಿಯಾಗಿದೆ.

ಕಾಲ್ದಳ, ಅಶ್ವದಳ, ಗಜದಳ, ಮತ್ತು ಫಿರಂಗಿಗಳೆಂದು, ನಾಲ್ಕು ವಿಭಾಗಗಳಾಗಿ ವಿಂಗಡಿಸಬಹುದು ಅಥವ ಸಹಾಯಕ ಸೈನ್ಯಕ್ಕೆ ಸೇರಿದ ಒಂಟೆ ಮತ್ತು ಎತ್ತುಗಳನ್ನು ಸಹ ಯುದ್ದದ ಬಳಕೆಗೆ ಸಹಾಯಕಗಳಾಗಿದ್ದವು.

**ನೌಕಾಯುದ್ಧಗಳು**

"ನೌಕಾಪಡೆಯು ಭಾರತದಲ್ಲಿ ಪ್ರಾಚೀನ ಕಾಲದಿಂದಲೂ ಅಸ್ಥಿತ್ವದಲ್ಲಿದ್ದುದು ಪುರಾತತ್ವ ಹಾಗೂ ಸಾಹಿತ್ಯ ಆಕಾರಗಳಿಂದ ವ್ಯಕ್ತಗೊಳ್ಳುತ್ತದೆ."[೬೫] ಈ ಯುದ್ದವು ವಿಜಯನಗರದ ಅರಸರು ಮೂಲತಹವಾಗಿ ಕಂಡುಕೊಂಡಿರುವ ಸಂಗತಿಯಾಗಿದೆ. ಕರ್ನಾಟಕದಲ್ಲಿ ಬಾದಾಮಿ ಚಾಲುಕ್ಯರ ಅರಸರಾದ ಮಂಗಳೇಶ ಮತ್ತು ಪುಲಕೇಶಿಯು ಅನೇಕ ದ್ವೀಪಗಳನ್ನು ನೌಕಾಸೈನ್ಯದ ಸಹಾಯದಿಂದ ಗೆದ್ದುದು ಐಹೊಳೆ ಶಾಸನದಿಂದ ತಿಳಿದು ಬರುವುದು. ಹಿಮ್ಮಡಿ ಪುಲಕೇಶಿಯು ೧೦೦ ನೌಕೆಗಳ ನೆರವಿ ನಿಂದಪುರಿಯ ಪ್ರಾಬಲ್ಯವನ್ನು ಅಡಗಿಸಿ ರೇವತಿ ಮತ್ತಿತರ ದ್ವೀಪಗಳನ್ನು ವಶಪಡಿಸಿಕೊಂದ್ದು ತಿಳುಬರುತ್ತದೆ, ಇದರ ಪ್ರತೀಕದಿಂದ ಯುದ್ದಗಳನ್ನು ಸಾಮ್ರಾಜ್ಯ ರಕ್ಷಣೆ ಆಡಳಿತಪ್ರದೇಶದ ಜನಸಾಮಾನ್ಯರ ರಕ್ಷಣೆಗೆ ರಾಜದಾನಿಯಲಿ ಬೃಹತ್ ಪ್ರಮಾಣದ ಬಲಿಷ್ಠಸೈನ್ಯ ಹಾಗೂ ಸೈನಿಕರು ಬೇಕಾಗಿರುತ್ತದೆ. ಪ್ರಾಚೀನ ನೌಕ ಪರಂಪರೆಯ ಅಡಿಪಾಯದ ಮೇಲೆ ಅನಂತರ ಬಂದ ಪಲ್ಲವರು ಮತ್ತು ನೌಕಾಪಡೆಗಳ ಮೂಲಕ ಸಾಗರದಾಚೆಯ ದಿಗ್ವಿಜಯ ಸಾಧಿಸಿದ್ದುದನ್ನು ಸಂಗಮ್ ಸಾಹಿತ್ಯದಲ್ಲಿ ವರ್ಣಿಸಲಾಗಿದೆ.

ವಿಜಯನಗರ ಸಾಮ್ರಾಜ್ಯವು ಪ್ರಾಬಲ್ಯತೆಯನ್ನು ಹೊಂದಿರುವ ಸಾಮ್ರಾಜ್ಯವು ಇದು. ದೇಶ ವಿದೇಶಿಯರ ಪ್ರವಾಸಿಗರ ತಾಣವಾಗಿದೆ. "ಹಂಪಿಯ ವಿರೂಪಾಕ್ಷೇಶ್ವರ ಆಶ್ರಯ ಸಾಮ್ರಾಜ್ಯಕ್ಕೆ ನಿರ್ದೇಶನವಾಗಿದೆ. ಇಲ್ಲಿ ವಿಜಯನಗರ ಕಾಲದ ನೌಕಾಪಡೆಯು ಶ್ರೀಲಂಕಾದ ಮೇಲೆ ವೀರ ಕಂಪಣರಾಯನ ನೇತೃತ್ವದಲ್ಲಿ ಶ್ರೀಲಂಕಾದ ಮೇಲೆ ದಂಡೆತ್ತಿ ಹೋದುದಾಗಿ ನೀಲಕಂಠಶಾಸ್ತ್ರೀಯವರದು ಹೇಳಿಕೆ ಯೊಂದೆ ಆದರೆ ಇದಕ್ಕೆ ಸರಿಯಾದ ಪುರಾವೆಗಳು ದೊರೆತಿಲ್ಲ."[೬೬] ವೀರ ಕಂಪಣ ರಾಯನ ದ್ವಾರ ಜಯವನ್ನು ಸಾರುವ ಮಧುರ ವಿಜಯಂ ಕೃತಿಯಲ್ಲೂ ಶ್ರೀಲಂಕಾದ ದಂಡಯಾತ್ರೆನು ಕುರಿತು ಸ್ಪಷ್ಟವಾಗಿ ಹೇಳಿಕೆಯಿಲ್ಲದಾಗಿದೆ. ಆದರೆ ೫ನೇ ವರ್ಗದ – ೯ನೇ ಪದ್ಯವೊಂರಲ್ಲಿ ಸಿಂಹಳವು ವಿಜಯನಗರದ ಅದೀನ ರಾಜ್ಯವಾಗಿತ್ತೆಂದು ಹೇಳಲಾಗಿದೆ. ಆದರೆ ಇದರಿಂದ ಶ್ರೀಲಂಕಾವನ್ನು ಕಂಪಣ ಜಯಸಿದ್ದನೇ ಇಲ್ಲವೊ ಎಂಬುದನ್ನು ಹೇಳುವುದು ಕಷ್ಟವಾಗಿದೆ. ವಿಜಯನಗರವನ್ನು ಪೆರಿಸ್ತಾ ವರ್ಣಿಸುತ್ತಾ ಮಲಬಾರ್ ಸಿಲೋನ್ ಇತರ ವ್ಯಾಪ್ತಿಗಳ ರಾಯರು (೧ನೇಯ ಬುಕ್ಕ) ದರಬಾರಿನಲ್ಲಿ ರಾಯಾಭಾರಿಗಳನ್ನು ಇಟ್ಟಿದ್ದರು ಮತ್ತು ಪ್ರತಿವರ್ಷ ಕಾಣಿಕೆ ಸಲ್ಲಿಸುತ್ತಿದ್ದರು. ಪೆರಿಸ್ತಾನು ತನ್ನ ವರದಿಯನ್ನು ಬರೆದುದು ವಿಜಯ ನಗರೋತ್ತರ ಕಾಲದಲ್ಲಿ ಆದುದರಿಂದ ಇಲ್ಲಿ ದಂಡಯಾತ್ರೆ

ಕೈಗೊಂಡ ವಿಚಾರ ಬರುವುದಿಲ್ಲ. ಆದ್ದರಿಂದ ಶ್ರೀಲಂಕಾ ಅಧೀನವಾದ ಅಂಶವನ್ನು ಈ ಮೇಲಿನ ಎರಡೂ ಹೇಳಿಕೆಗಳು ನೀಡುವುದರಿಂದ ವಿಜಯನಗರವು ನೌಕಾಪಡೆಯನ್ನು ಹೊಂದಿತ್ತೆಂದು ಹೇಳಬಹುದಾಗಿದೆ.

ವಿಜಯನಗರದ ಆರಂಭದ ಅರಸರಲ್ಲಿ ಪೂರ್ವ-ಪಶ್ಚಿಮದ ಸಮುದ್ರಾಧಿಪತಿ ಎಂದು ಬುಕ್ಕರಾಯನು ಚತುಸಮುದ್ರಾಧಿಪತಿಯೆಂದು ಕರೆದುಕೊಂಡಿದಾರೆ. ೧ನೇ ದೇವರಾಯನು ಪೂರ್ವ ಪಶ್ಚಿಮ ದಕ್ಷಿಣೋತ್ತರ ಚತುಸಮುದ್ರಾಧಿಪತಿ ಎಂಬ ಬಿರುದನ್ನು ಧರಿಸಿದ್ದುದು ಶಾಸನದಿಂದ ತಿಳಿದು ಬರುತ್ತದೆ. ಈ ಬಿರುದುಗಳು ವಿಜಯ ನಗರ ಆರಂಭದ ಅರಸರು ಸಮುದ್ರದ ಮೇಲೆ ಸಾಧಿಸಿದ ಹಿಡಿತ ಸಂಕೇತಗಳೇನೋ ನಿಜ. ಆದರೆ ಅವುಗಳನ್ನು ಯಾರೊಂದಿಗೆ ಮತ್ತು ಯಾವಾಗ ಯುದ್ದ ಕೈಗೊಂಡರೆಂಬ ವಿವರ ತಿಳಿದು ಬಂದಿರುವುದಿಲ್ಲ.

ಕೃಷ್ಣದೇವರಾಯನ ಕಾಲದಲ್ಲಿ ಇಬ್ಬರು ನಾವಿಕ ಮುಖಂಡರಿದ್ದುದ್ದನ್ನು ಬಾರ್ಬೊಸನು ಹೇಳುತ್ತಾನೆ. ಈ ರಾಜ್ಯದ ಅಧಿಪತಿಯ (ಕೃಷ್ಣ ದೇವರಾಯ) ಆಶ್ರಯದಲ್ಲಿ ಇಬ್ಬರು ಕಡಲುಗಳ್ಳ ನಾಯಕರಿದ್ದರು. ಒಬ್ಬನ ಹೆಸರು ತಿಮ್ಮಾಜಿ (ತಿಮ್ಮೋಜಿ) ಮತ್ತೊಬ್ಬನ ಹೆಸರು ರಾವ್‌ಜಿ (ಮಾಧವರಾವ್) ಪ್ರತಿಯೊಬ್ಬರ ಬಳಿಯಲ್ಲಿ ಸುಸಜ್ಜಿತವಾದ ಐದಾರು ಹಡಗುಗಳಿರುತ್ತಿದ್ದವು. ಇವರು ಸಮುದ್ರದ ಮೇಲೆ ಹೋಗಿ ಮಲಬಾರೀ ಹಡಗುಗಳನ್ನು ಬಿಟ್ಟು ಉಳಿದೆಲ್ಲಾ ಹಡಗುಗಳನ್ನು ಕೊಳ್ಳೆ ಹೊಡೆಯುತ್ತಿದ್ದರು. ಇದರಲ್ಲಿ ತಿಮ್ಮಜ್ಜ ಮತ್ತು ರಾವ್‌ಜಿ ಇವರಿಬ್ಬರು ನಾಯಕರೆಂದರು. ಇಲ್ಲಿ ವ್ಯಕ್ತಗೊಳ್ಳಲು ಸುಸಜ್ಜಿತವಾಗಿ ಹಡಗುಗಳು ಅಥವಾ ಪಾಡುಗಳಿದ್ದುದನ್ನು ಗಮನಿಸಬೇಕಾಗಿರುವ ವಿಷಯದ ಸಂಗತಿಯಾಗಿದೆ. ವಿಜಯನಗರ ಕಾಲದ ಸಮುದ್ರ ದಾಚೆಯ ಪ್ರದೇಶಗಳನ್ನು ವಶಪಡಿಸಿಕೊಳ್ಳಲು ಬೇಕಾದ ಸೇನೆಯನ್ನು ಕೊಂಡೊಯ್ಯಲು ಸಾಕಷ್ಟು ಹಡಗುಗಳನ್ನು ಬಳಸಿಕೊಂಡಿದ್ದರೆಂದು ಇತಿಹಾಸದ ಹಿನ್ನಲೆಯಾಗಿದೆ. ವಿಜಯನಗರ ಐತಿಹ್ಯಗಳು ಜನಸಾಮಾನ್ಯರಲ್ಲಿ ಮತ್ತು ರಾಜರ ಮನೆತನಗಳ, ಸಾಹಿತ್ಯಗಳ, ಕಲಾವಿದರ, ಕಲಾ ಸಂಗೀತರಲ್ಲಿ ಮರೆಯಲಾಗದ ಸವಿನೆನಪುಗಳಾಗಿ ಉಳಿದಿವೆ. ಅಚ್ಯುತರಾಯ ಮತ್ತು ಸದಾಶಿವರಾಯ ಕಾಲದಲ್ಲಿ ವಿಜಯನಗರದ ಸೇನೆ ಶ್ರೀಲಂಕಾದ ಮೇಲೆ ದಂಡೆತ್ತಿ ಹೋಗಿದ್ದೆಂದು ತಿಳಿದು ಬರುತ್ತದೆ. ಒಟ್ಟಿನಲ್ಲಿ ವಿಜಯನಗರವು ಆರಂಭದ ಅರಸರಿಂದ ಹಿಡಿದು ಸದಾಶಿವರಾಯನವರೆಗೆ ಶ್ರೀಲಂಕಾ ಮತ್ತಿತರ ದ್ವೀಪಗಳ ಮೇಲೆ ಹಡಗುಗಳ ಮೂಲಕ ಸೇನೆಯನ್ನು ಕೊಂಡೊಯ್ದು ನೌಕಾಯುದ್ದಗಳನ್ನು ಕೈಗೊಂಡಿದ್ದರು ಹಾಗೂ ಅವರು ಕೈಗೊಂಡ ಯುದ್ದಗಳಲ್ಲಿ ಜಯಗಳು ಕೊನೆಯವರೆಗೂ ದ್ವೀಪಗಳ ಮೇಲೆ ತಮ್ಮ ಹಿಡಿತ ಸಾಧಿಸಿದ್ದರೆಂಬುದು ಸ್ಪಷ್ಟವಾಗಿ ಕಂಡುಬಂದಿರುವುದು ವಿಜಯನಗರ ಸಾಮ್ರಾಜ್ಯವು ಯುದ್ದವು ಇತಿಹಾಸ ಪುಟಗಳಲ್ಲಿ ಅಚ್ಚು ಉಳಿದಿದೆ.

ವಿಜಯನಗರ ಸಾಮ್ರಾಜ್ಯಕ್ಕೆ ಸಂಬಂದಿಸಿದ ಹಂದಿ(ವರಹ)ವು ವಿಜಯನಗರ ಅರಸರಿಗೆ ಲಾಂಛನವಾಗಿತ್ತು. ಈ ಲಾಂಛನವು ಮಹಾವಿಷ್ಣುವಿನ ಅವತಾರವೇ ವರಹ ಅದಕ್ಕಾಗಿ ಅದನ್ನು ರಾಜ

ಲಾಂಛನವಾಗಿಸಿದರು ಮತ್ತು ತಮ್ಮ ಕರೆನ್ಸಿಗೆ ವರಹವೆಂದು ಕರೆದರು. ಜನಪದರ ನಿಲುವು ಇನ್ನು ಆಳಕ್ಕೆ ಕಡಿಮೆಯಾಗಿತ್ತು ಮಹಾವಿಷ್ಣುವಿಗೆ ಇಬ್ಬರು ಹೆಂಡ್ತಿಯರು ಅವರುಗಳೇ ಶ್ರೀದೇವಿ ಹಾಗೂ ಭೂದೇವಿ ಒಬ್ಬಳು ದೇವತಲೆಯ ಭಾಗದಲ್ಲೂ, ಪಾದತಳದಲ್ಲೂ ನೆಲೆಸಿದವರು ಇದು ಜನಪದ ಪ್ರಜ್ಞಾ ಪರಂಪರೆಯಲ್ಲಿ ನೆಲ ಮತ್ತು ಆಕಾಶಗಳನ್ನು ಸಂಕೇತಿಸುವ ಕಲ್ಪನೆ ಇರಬಹುದೆಂದು ಊಹಿಸಬಹುದು. ಹಿರಣ್ಯ ಕಶ್ಯಪ ಮತ್ತು ಹಿರಿಣಾಕ್ಷ ಎಂಬ ರಾಕ್ಷಸ ದೈಯರು ಲೋಕಕಂಠಕರಾಗಿದ್ದರು. ಮೊದಲು ವಿಷ್ಣುವಿಗೆ ಕೋಪಬರುವಂತೆ ಮಾಡಿದರು. ಇದನ್ನು ಉಪಾಯದಿಂದ ಹಿರಿಣಾಕ್ಷನಿಂದ ಕೆಣಕುವಂತೆ ಮಾಡಿದರು. ಇದರಲ್ಲಿ ನಾರದ ಮುನಿ ಪಾತ್ರ ಬಹಳವಾಗಿತ್ತು. ಮಹಾವಿಷ್ಣುವಿನ ಹೆಂಡಿರ ಭೂದೇವಿಯನ್ನು ಕೆಣಕುವಂತೆ ನಾರದ ಹಿರಿಣಾಕ್ಷನಿಗೆ ಹೇಳಿಕೊಟ್ಟನು. ಈ ವಿಜಯನಗರದ ರಾಜರು ಸಾಮ್ರಾಜ್ಯದ ರಾಜರು ಆಡಳಿತವು ಸಹ ಇದೊಂದು ನಡೆದು ಬಂದ ಸಂಗತಿಯಾಗಿತ್ತು. ಯುದ್ಧದ ಈ ಭೂ ದೃಶ್ಯವನ್ನು ವಿಜಯನಗರ  ಅರಸರಲ್ಲಿ ಮೂಡಿ ಬಂದಿತ್ತು

"ವಿಜಯನಗರದ ಅರಸರಿಗೆ ಮೇಲಿಂದ ಮೇಲೆ ಇಸ್ಲಾಂ ದೊರೆಗಳು ಕಿರುಕುಳ ಇತ್ತೆಂದು ಇತಿಹಾಸ ತಿಳಿಸುತ್ತದೆ. ಬಹುಶಃ ಕರ್ನಾಟಕ ಯಾವ ಸಾಮ್ರಾಜ್ಯಕ್ಕೆ ಇಸ್ಲಾಂ ಧರ್ಮಗಳು ಕಿರುಕುಳ ಈ ಪ್ರಮಾಣದಲ್ಲಿರಲಿಲ್ಲ ಎನಿಸುತ್ತದೆ."[೬೭] ಇದನ್ನು ವಿಜಯನಗರದ ಅರಸರು ಇಸ್ಲಾಂ ದೊರೆಗಳು ಸಮರ್ಥವಾಗಿ ಯುದ್ಧದಲ್ಲಿ ಎದುರಿಸಿದರೂ ಹಾಗೂ ಇಸ್ಲಾಂ ಧರ್ಮ ಗ್ರಂಥವಾದ ಕುರಾನಿನಲ್ಲಿ ಹಂದಿ ಮಾಂಸ ನಿಷೇಧವಿದೆ. ದಾರ್ಮಿಕ ನಿಷಿದ್ದವೊಂದನ್ನು ತಾವು ಪ್ರಸಿದ್ದವಾಗಿಸಿಕೊಂಡ ಅವರನ್ನು ಮಾನಸಿಕವಾಗಿಯೂ ದೂರ ಇರಿಸಬಹುದು.

ವಿಜಯನಗರ ಆಳ್ವಿಕೆಯಲ್ಲಿ ಯುದ್ದಗಳೆಂದು ಜನಗಳಲ್ಲಿ ಮನ ಹೊಳವಸುತಕ್ಕಂತಹ ಅರಸರಲ್ಲಿ ಪ್ರತೀರೂಪಕ್ಕೆ ಬೆಳವಣಿಗೆಗೆ ದಾರಿಯಾಯಿತು. ಹಿಂದೆ ವಿಜಯನಗರಕಾಲದಲ್ಲಿ ಸೈನ್ಯದಲ್ಲಿದ್ದರೆನ್ನಲಾದ ಇವರು ತಮ್ಮ ರಾಜರುಗಳಂತೆ ಹಂದಿಯನ್ನು ವರಹಾವತಾರ, ಎಂದು ತಿಳಿದು ಪೂಜಿಸಿದ್ದಾರೆ. ಇದೊಂದು ಕುರುಹಾಗಿರಬೇಕು. ದೈನಂದಿನ ಬದುಕಿನಲ್ಲಿ ಅವರು ಬಳಸುವ ಉಪಕರಣಗಳು ಇತ್ಯಾದಿಗಳಿಗೆ ಹಂದಿಯ ಕೊಬ್ಬನ್ನು ಲೇಪಿಸುತ್ತಾರೆ.

ವಿಜಯನಗರ ಸಮ್ರಾಜ್ಯದ ಅರಸರು ಅನೇಕ ರೀತಿಯ ಯುದ್ದಗಳ ಬಳಕೆಯ ಉಪಕರಣಗಳು ಬಳಸಿ ರಾಮಾಯಣ, ಮಹಾಭಾರತ ಯುದ್ದಗಳಲ್ಲಿ ನಡೆದ ಸಂಗತಿಗಳು ವಿಚಾರಣಾತ್ಮಕವಾದ ಆಡಳಿತವನ್ನು ವಿಜಯನಗರ ಅರಸರಲ್ಲಿ ನೋಡಬಹುದಾಗಿದೆ. ಯುದ್ಧಕ್ಕೆ ಅನೇಕ ವಿಧಿವಿಧಾನಗಳ ಜನಗಳ ಬಳಕೆ, ಪ್ರಾಣಿಗಳು, ಸಾವಿರಾರು ಕುದುರೆಗಳು, ಆನೆಗಳು, ಕಲಾವಿದರು, ಜನಪದರು, ಸಮುದಾಯಗಳು ಮತ್ತು ಬೃಹತ್ ಸೇವಕರು, ಸೈನಿಕರು ವಿಜಯನಗರ ಸಾಮ್ರಾಜ್ಯಕ್ಕೆ ಅತ್ಯವಶ್ಯಕವಾದ ಬಳಕೆಗಳಾಗಿವೆ.

**ಸೇನಾಬಲ**

"ವಿಜಯನಗರವು ಬೃಹತ್ ಪ್ರಮಾಣದ ಸೈನ್ಯವನ್ನು ಹೊಂದಿದ್ದಿತ್ತು. ಈ ಕುರಿತು ವಿಫುಲ ಮಾಹಿತಿಯನ್ನು ವಿದೇಶಿ ಪ್ರವಾಸಿಗರು ವರದಿಗಳನ್ನು ನೀಡಿದ್ದಾರೆ. ಅಲ್ಲದೆ ಇವುಗಳಿಗೆ ಪೂರಕವಾಗಿ ಶಾಸನ, ಸಾಹಿತ್ಯ, ಮತ್ತಿತರ ಆಕರಗಳು ನೆರವಾಗಿದ್ದ, ಪ್ರಾಚೀನ ಕಾಲದಿಂದಲೂ ಭಾರತದಲ್ಲಿ ಅಪಾರವಾದ ಸೇನೆಯನ್ನು ಅರಸು ಮನೆತನಗಳು ಹೊಂದಿದ್ದವು."[೬೮] ಕ್ರಿ.ಪೂ. ೪ನೆಯ ಶತಮಾನದಲ್ಲಿ ಭಾರತದ ಮೇಲೆ ದಂಡೆತ್ತಿ ಬಂದ ಗ್ರೀಕ್ ಚಕ್ರವರ್ತಿ ಅಲೆಗ್ಸಾಂಡರನ ಕಾಲದಲ್ಲಿ ಮಗದ ರಾಜ್ಯದ ಸೈನ್ಯವು ೬ ಲಕ್ಷ ಕಾಲಾಳುಗಳು, ೩೦,ಸಾವಿರ ಅಶ್ವದಳ, ೯,ಸಾವಿರ ಗಜಗಳಿಂದ ಕೂಡಿತ್ತೆಂದು ಹೇಳಲಾಗಿದೆ. ವಿಜಯನಗರ ಸಾಮ್ರಾಜ್ಯದ ಆಡಳಿತಾತ್ಮಕವು ಜನಸಾಮಾನ್ಯರಿಗೆ ವ್ಯವಹಾರಿಕವಾಗಿ ಸಾಮಾಜಿಕ ಜೀವನದ ಪ್ರತಿರೂಪವನ್ನು ಯುದ್ದಗಳು ನಡೆದ ಮಾಹಿತಿಯನ್ನು ಸಂಗ್ರಹಿಸಲು ಅಲ್ಲಿನ ಜೀವನಾರ್ಥದ ಸಂಗತಿಗಳನ್ನು ಕಂಡುಕೊಳ್ಳಲಾಗಿದೆ. ಪ್ಲೀನಿ ಮತ್ತು ಪ್ಲೂಟಾರ್ಕ್‌ರು ಮೌರ್ಯ ವಂಶದ ಸ್ಥಾಪಕ ಚಂದ್ರಗುಪ್ತನ ಹಾಗೂ ರಥಗಳಿದ್ದವೆಂದು ಸೈನ್ಯದಲ್ಲಿ ೯,೦೦೦ ಆನೆಗಳು, ೩೦,೦೦೦ ಕುದುರೆಗಳು, ಮತ್ತು ೬೦,೦೦೦ ಸೈನಿಕರು ಹಾಗೂ ರಥಗಳಿದ್ದವೆಂದು ಹೇಳುತ್ತಾರೆ. ವಿಜಯನಗರದ ರಾಜಧಾನಿ ಉಳಿಯಲಿಕ್ಕೆ ಅನೇಕ ರೀತಿಯ ಯುದ್ಧಗಳಿಗೆ, ಸಂಭಂದಿಸಿದ ಉಪಕರಣಗಳು, ಸಾಮಾಗ್ರಿಗಳು, ಬಳಕೆಗೆ ಅವಶ್ಯಕವಾಗಿದೆ. ಸೈನ್ಯವನ್ನು ಸಂಖ್ಯೆ ಪ್ರಮಾಣದಲ್ಲಿ ಗುರುತಿಸುವ ಸಲುವಾಗಿ "ಘಟಕ" "ಘಟ್ಟಂ" ಅಕ್ಷೌಹಿಣಿ ಸೆಳೆಂಬುದಾಗಿ ಕರೆಯುತ್ತಿದ್ದರು. ಇಂತಷ್ಟು ಆನೆಗಳು, ಕುದುರೆಗಳು, ಒಂಟೆಗಳು ಸಹಾ ಯುದ್ಧಕ್ಕೆ ಸಹಾಯಕವಾಗಿದ್ದವು. ವಿಜಯನಗರವು ಬೃಹತ್ ಪ್ರಮಾಣದ ಸೇನೆಯನ್ನು ಹೊಂದಿದ್ದಿತು. "ವಿಜಯನಗರ ಆರಂಭ ಕಾಲದ ಸೇನಾ ವಿವರವು ನಿಮಗೆ ದೊರೆಯುವುದು ಫೆರಿಸ್ತಾನಿಂದ ಅವನು ಕ್ರಿ. ಶ. ೧೩೬೬-೬೮ ರಲ್ಲಿ ಯುದ್ಧದಲ್ಲಿ ಪಾಲ್ಗೊಂಡಿದ್ದ ಬಹುಮನಿ ಮತ್ತು ವಿಜಯನಗರಗಳ ಸೇನೆಯನ್ನೂ ಇದ್ದವು ಎಂದು ಹೇಳಲಾಗಿದೆ. ಅದರಂತೆ ಮಹಮ್ಮದ ಶಹನ ಸೇನೆಯಲ್ಲಿ, ೩೦,೦೦೦ ಅಶ್ವದಳ ೨,೦೦೦ ಆನೆಗಳು ಮತ್ತು ೧೦,೦೦,೦೦೦ ಕಾಲಾಳುಗಳಿದ್ದವು."[೬೯] ವೈರಿಪಡೆಯಾದ ವಿಜಯನಗರವು ೫೦,೦೦,೦೦೦ ಅಶ್ವದಳ, ಕಾಲಾಳುಗಳು ಮತ್ತು ೪೦,೦೦೦ ಅಶ್ವಗಳನ್ನು ಹೊಂದಿತ್ತೆಂದು ಹೇಳುವುದು. ಮತ್ತು ಯುದ್ಧಗಳ ವ್ಯವಸ್ಥೆಯ ಪ್ರಮುಖವಾದ, ಸೈನ್ಯದಳಗಳು, ಅಶ್ವದಳಗಳು, ಅನೇಕ ಸೇನಾಬಲವು ಯುದ್ಧಕ್ಕೆ ನಾಂದಿಯಾಗಿದೆ. "ಫೆರಿಸ್ತಾ ನೀಡುವ ಈ ಮೇಲಿನ ಸೇನಾವಿವರ ಉತ್ಪ್ರೇಕ್ಷೆಯಿಂದ ತುಂಬಿದ್ದರು ಅವನೇ ಹೇಳುವಂತೆ ಬಹುಮನಿ" ಮನೆತನದ ರಾಜರು ಮೇಲ್ಮಟ್ಟದ ಕಲಿತದಿಂದಲೆ ತಮ್ಮ ಸ್ಥಾನಮಾನಗಳನ್ನು ಉಳಿಸಿಕೊಂಡಿದ್ದಾರೆ, ಹಾಗೂ ಕ್ರಿ.ಶ ೧೪೨೦ರಲ್ಲಿ ಬೇಟಿನೀಡಿದ್ದ ನಿಕೋಲೊಕೊಂಡಿಯಾ ಈ ನಗರದಲ್ಲಿ (ವಿಜಯನಗರ) ಶಸ್ತ್ರಾಸ್ತ್ರಗಳಲ್ಲಿ ಪ್ರವೀಣರಾದ ೯೦,೦೦೦ ಜನರಿದ್ದಾರೆಂದು ಅಂದಾಜು ಹಾಕಲಾಗಿದೆ. ಹೀಗೆ ದೇಶೀಯ ಪ್ರವಾಸಿಗರು ವಿಜಯನಗರ ಸಾಮ್ರಾಜ್ಯದ ರಾಜದಾನಿಯ ಬಗ್ಗೆ ಸಂಶೋಧನೆಯನ್ನು ಅಧ್ಯಯನ ಮಾಡಲಾಗಿದ್ದು, ಅನೇಕ ಪ್ರಾಂತೀಯ ಸೈನ್ಯದ ಉಲ್ಲೇಖವನ್ನು ನೀಡುವನು, ಅವನು (ನ್ಯೂನಿಜ್ಂ) ಹೇಳುವಂತೆ ವಿಜಯನಗರ

ಸಾಮ್ರಾಜ್ಯ ವಿಂಗಡನೆಯಾಗಿದ್ದ ಒಟ್ಟು ೨೦೦ ಸಾಮಾಂತರಲ್ಲಿ ಕಡ್ಡಾಯವಾಗಿ ಸೈನ್ಯವನ್ನು ಕಾಯ್ದಿಟ್ಟುಕೊಳ್ಳಬೇಕಾಗಿದೆ. ೧೧ ಜನರು ಪ್ರಾಂತೀಯ ಸೈನ್ಯದ ವಿವರವನ್ನು ನೀಡಿರುತ್ತಾನೆ. ಒಟ್ಟು ಸೈನ್ಯವು ೧೯,೦೦೦, ಅಶ್ವದಳ ೧,೭೧,೭೦೦, ಕಾಲ್ದಳ ಮತ್ತು ಗಜಗಳು ೬೩೩ ಎಂದಿದ್ದಾರೆ. ಎಂದು ನ್ಯೂನಿಜ್‌ರವರ ಅಭಿಪ್ರಾಯವಾಗಿತ್ತು.

**ಕಾಲ್ದಳ**

ಸೈನ್ಯ ವ್ಯವಸ್ಥೆಯಲ್ಲಿ ಕಾಲ್ದಳದ ಪಾತ್ರ ತುಂಬಾ ಹಿರಿದು ಸೈನಿಕ ಕಾರ್ಯಚರಣೆಯಲ್ಲಿ ಕಾಲ್ದಳ ಪಾತ್ರ ಮಹತ್ವದ್ದು ಬಹಳ ಸಂಖ್ಯೆಯಲ್ಲೂ ಸೈನ್ಯದ ಬಹುಭಾಗ ಕಾಲ್ದಳದ್ದೇ ಆಗಿತ್ತು. ಇದು ಸೇನೆಯ ಮುಖ್ಯ ಭಾಗವು ಆಗಿದ್ದೂ ಈ ದಳವು ಯಾವುದೇ ವಾಹನವಿಲ್ಲದೇ ನೆಲದ ಮೇಲೆ ನಿಂತು ಹೋರಾಡುತ್ತಿದ್ದ ಯೋಧರ ಪಡೆಯಾಗಿದ್ದಿತು. ಇದಕ್ಕೆ ಕಾಲ್ದಳಗಳು ಎಂದು ಕರೆಯಲಾಗಿದೆ.

"ಕ್ರಿ.ಪೂ. ೬ನೇ ಶತಮಾನದ ಹೊತ್ತಿಗೆ ಭಾರತದಲ್ಲಿ ಕಾಲ್ದಳವುಸೈನ್ಯದ ಪ್ರಮುಖ ಅಂಗವಾಗಿತ್ತೆಂಬುದು ವಿದ್ವಾಂಸರ ಅಭಿಪ್ರಾಯವಾಗಿತ್ತು."[೨೦] ಕಾಲ್ದಳವನ್ನು ಅರಿಯುವ ಮುನ್ನ ಒಂದು ಸೈನ್ಯದಲ್ಲಿ ಎಷ್ಟು ಮಂದಿ ಕಾಲಾಳುಗಳಿರುತ್ತಿದ್ದರು ಹಾಗೂ ಅವರುಗಳನ್ನು ಹೇಗೆ ವಿಂಗಡಿಸಲಾಗುತ್ತೆಂದರೆ ಬಲಿಷ್ಠವಾದ ಸೈನ್ಯದಳದ ಯುದ್ಧಭೂಮಿಯಲ್ಲಿ ಅವರು ಯಾವ ರೀತಿ ಕಾರ್ಯಗಳನ್ನು ಮಾಡಲಾಗಿತು ಎನ್ನುವುದರ ಬಳಕೆ ಪ್ರಯತ್ನಗಳನ್ನು ಮಾಡಲಾಗಿದು ಅಲ್ಲಿನ ನಾಯಕರು ಇನ್ನಿತರ ಸಮುದಾಯಗಳು ಮತ್ತು ಇವರ ಆಯುಧ ಮತ್ತು ಉಡುಪುಗಳನ್ನು ಧರಿಸಿದ್ದರು ಎನ್ನುವುರ ಮಾಹಿತಿಯ ಅಂಶಗಳನ್ನು ಗಮನದಲ್ಲಿರಿಸಿಕೊಂಡಿರ ಬೇಕಾಗುತ್ತದೆ. ವಿಜಯ ನಗರದ ಪ್ರಮುಖ ಹಬ್ಬ ವಿಜಯದಶಮಿಯಂದು ಕೈಗೊಂಡ ಅರಸರ ಸೇನಾ ವೀಕ್ಷಣೆಯದು ಅದು ಕೇಂದ್ರ ಮತ್ತು ಪ್ರಾಂತೀಯ ಸೈನ್ಯಗಳೆಲ್ಲವೂ ಸಾಮಾನ್ಯವಾಗಿ ಮಾರಿಡಲಿಕನೊಂದಿಗೆ ರಾಜದಾನಿಯನ್ನು ಸೇರುತ್ತಿದ್ದಿಬೇಕು. ಮತ್ತು ಸಾಮ್ರಾಜ್ಯದ ಕಾಲದಲ್ಲಿ ಬೃಹತ್ ಪ್ರಮಾಣದ ಕಾಲ್ದಳವಿದ್ದಿತು. ಆರಂಭದ ಅರಸರಿಂದ ಹಿಡಿದು ಸದಾಶಿವರಾಯ ರಾಮರಾಯರವರೆಗೂ ಕಾಲ್ದಳವನ್ನು ಬೃಹತ್ ಸಂಖ್ಯೆಯಲ್ಲಿ ಇಟ್ಟುಕೊಂಡಿದರು.

**ಸೈನಿಕರ ಉಡುಗೆ ತೊಡುಗೆಗಳು**

ಸೈನಿಕರು ಧರಿಸುತ್ತಿದ್ದ ಉಡುಪುಗಳ ವಿವರ ಒಂದೇ ತೆರನಾಗಿ ದೊರೆಯುವುದಿಲ್ಲ. ಆಯಾ ಪಡೆಗಳ ಗುರುತಿಸುವ ಸಲುವಾಗಿ ಬೇರೆ ಬೇರೆ ಉಡುಪುಗಳನ್ನು ಧರಿಸುತ್ತಿದ್ದವು. ಹಾಗೂ ಇದರ ವಿಶೇಷವಾಗಿ ಕೆಲವು ಯುದ್ಧಗಳಲ್ಲಿ ಉಡುಪುಗಳು ಧರಿಸದೇ ಹೋರಾಡಿದ ವಿವರಗಳು ಕಾಣಸಿಗುತ್ತವೆಂದು ಸಾಹಿತ್ಯಗಳ ಬರವಣಿಗೆಯ ಉಲ್ಲೇಖವಾಗಿದೆ.

**ಉಪಕರಣಗಳು**

ಹೊನ್ನಕಡೆಯ, ಚಿನ್ನದ ಕೈಯಂಬು, ಚಿನ್ನದ ಬೆಳ್ಳಿ, ಕಟ್ಟಿನ ಬಿಲ್ಲಿನ, ಕಯ್ಯ ಪೊನ್ನ ಪೊಡೆಯ, ಕಟ್ಟಿದ ರನ್ನದ ಬಂಕು, ಚಿನ್ನದ ಬೆಳ್ಳಿಯ ಹಾಸದ ಹೆರಿಗೆ, ಕುಸುರಿವೆಸೆದ ಮಿಸುನೀಯ ಹಕ್ಕರಿಕೆ,

ಬೆಳ್ಳಿಯ ಸಬಳ, ಚಿನ್ನದ ಬೆಳ್ಳಯ ಪಕ್ಕರೆ, ಹೊನ್ನ ಚೂಡಾಯತ ಇವೆಲ್ಲವೂ ಯುದ್ದ ಮಾಡುವ ಸೈನಿಕರ ಆಭರಣಗಳಾಗಿದ್ದವು.

**ಸೈನ್ಯದಲ್ಲಿ ಮಹಿಳೆಯರು**

ವಿಜಯನಗರ ಕಾಲದ ಸೈನ್ಯದಲ್ಲಿ ಮಹಿಳೆಯರ ಪಾತ್ರವನ್ನು ಮರೆಮಾಚುವಂತಿಲ್ಲ. ಪೂರಕ ಹಾಗೂ ಪೋಷಕ ಸೈನ್ಯದಲ್ಲಿ ಮಹಿಳೆಯರ ಪಾತ್ರ ಮುಖ್ಯವಾಗಿತ್ತು. ಮಹಿಳಾ ಯೋಧರು ಸೈನ್ಯದಲ್ಲಿದ್ದುದನ್ನು ಶಿಲ್ಪಗಳು, ವೀರಗಲ್ಲು, ಶಾಸನ ಹಾಗೂ ಪ್ರವಾಸಿಗರ ವರದಿಗಳು ಪ್ರಸ್ತಾಪಿಸಿವೆ. ಶಿಲ್ಪಗಳಲ್ಲಿ ವೀರ ಮಹಿಳೆಯರ ಚಿತ್ರಣಗಳನ್ನು ಗುರುತಿಸಬಹುದು. "ಹಜಾರರಾಮಚಂದ್ರ ದೇಗುಲದ ಪ್ರಕಾರ ಗೋಡೆಯ ಮೇಲಿನ ಪಟ್ಟಿಕೆಯಲ್ಲಿ ಇಬ್ಬರು ಮಹಿಳಾ ಯೋಧರು ಈಟಿಗಳನ್ನು ಹಿಡಿದು ಹೋರಾಡುತ್ತಿರುವ ದೃಶ್ಯವಿದೆ."[೨೧] ಈ ಮಹಿಳೆಯರು ವಿಜಯನಗರ ಸಾಮ್ರಾಜ್ಯದ ಯುದ್ದಕ್ಕೆ ವೀರ ಮಹಿಳೆಯರಾಗಿ ಯುದ್ಧಗಳಲ್ಲಿ ಜಯಗಳಿಸಿದರು ಮತ್ತು ಹಜಾರರಾಮಚಂದ್ರ ಸ್ಮಾರಕದ ಗೋಡೆಗಳ ಸಾಲು ಪಟ್ಟಿಕೆಗಳಲ್ಲಿ ಆನೆಯ ಮೇಲೆ ಸವಾರಿ ಮಾಡುತ್ತಿರುವವಲ್ಲಿ ಮಹಿಳೆಯರನ್ನು ಕಾಣಬಹುದು. ಇದರಿಂದ ಮಹಿಳೆಯರು ಪುರುಷನೊಂದಿಗೆ ಸೈನಿಕ ಕಾರ್ಯಚರಣೆಯಲ್ಲಿ ತೊಡಗಿದ್ದುದು ದೃಡವಾಗುತ್ತದೆ. ಆನೆ ಸವಾರಿಯಲ್ಲದೆ. ಕುದುರೆ, ಒಂಟೆ ಸವಾರಿಗಳನ್ನು ಬಲ್ಲವರಾಗಿದ್ದುದು ಇದೇ ಪ್ರಕಾರ ಶಿಲ್ಪ ಪಟ್ಟಿಕೆಯಲ್ಲಿ ಕಂಡು ಬರುತ್ತದೆ. ಇದು ಕುದುರೆ ಸವಾರಿಮಾಡುತ್ತಿರುವ ಮಹಿಳೆಯರು ಈ ಕುದುರೆಯ ಮುಂದೆ ಮತ್ತೊಬ್ಬ ಮಹಿಳೆಯು ಉದ್ದವಾದ ಭರ್ಜಿಯನ್ನು ಹಿಡಿದು ನಿಂತಿದ್ದಾಳೆ. ಮಹಿಳೆಯು ಯುದ್ದರಂಗದಲ್ಲಿ ಪಾಲ್ಗೊಳ್ಳುತ್ತಿದ್ದುದುಂಟು ಬೆಂಗಳೂರು ಸರ್ಕಾರ ಸಂಗ್ರಹಾಲಯ ಒಂದು ಶಿಲ್ಪದಲ್ಲಿ ಕುದುರೆ ಸವಾರಿಯಲ್ಲಿ ಹೋರಾಟ ಮಹಿಳೆಯರ ಛತ್ರಿ ಭಾಮಧಾರೆಯರೊಂದಿಗೆ ರಣರಂಗಕ್ಕೆ ಕಾದಾಡಲು ಹೋರಾಟದಂತಿವೆ. ಹಲವು ಬಗೆಗೆ ಶಿಲ್ಪಗಳನ್ನು ಹಲವು ಭಾಗಗಳಲ್ಲಿ ಕಾಣಬಹುದು. ವೀರಗಲ್ಲುಗಳಲ್ಲಿ ಮಹಿಳಾ ಹೋರಾಟಗಾರರು ಇದ್ದುದನ್ನು ಕಾಣಬಹುದಾಗಿದೆ. ಹಾಗೂ ಮಧ್ಯಯುಗದ ವೀರ ಮಹಿಳೆಯೊಬ್ಬಳು ಶತ್ರು ಶತ್ರುವಿನೊಂದಿಗೆ ಹೋರಾಡಿ ಮಡಿದ ನೈಜ ಘಟನೆಯ ದಾಖಲೆಯಾಗಿದೆ.

ಮಹಿಳಾ ಹೋರಾಟಗಳನ್ನು ಚಿತ್ರಿಸುವ ೩ ವೀರಗಲ್ಲುಗಳು ಕೊಪ್ಪಳದಲ್ಲಿವೆ. ಕಣಶಿಲೆಯ ಚಪ್ಪಡಿಗಳಲ್ಲಿ ಕಡಿದ ಈ ವೀರಗಲ್ಲುಗಳನ್ನು ವಿಜಯನಗರ ಕಾಲವೆಂದು ಗುರುತಿಸಲಾಗಿದೆ. ಈ ಮಹಿಳಾಯುದ್ದದಲ್ಲಿ ಯೋಧಳೊಬ್ಬಳು ತನ್ನ ಎದುರಾಳಿಯನ್ನು ವೀರಾವೇಶದಿಂದ ಎದುರಿಸುತ್ತಿರುವ ದೃಶ್ಯವನ್ನು ಹೊಂದಿದೆ ಈ ಮಹಿಳೆಯು ಮುಡಿಯನ್ನು ಕಟ್ಟಿದ್ದು, ನೆರಿಗೆಯುಳ್ಳ ಸೀರೆಯನ್ನು ಧರಿಸಿರುವಳು ಅವಳು ತನ್ನ ಕೈಗಳಲ್ಲಿ ಕತ್ತಿ ಗುರಾಣಿಗಳನ್ನು ಹಿಡಿದು ಹೋರಾಡುವ ದೃಶ್ಯಗಳನ್ನು ಹಜಾರಾಮಚಂದ್ರ ದೇವಾಲಯದ ಗೋಡೆಗಳ ಮೇಲೆ ಇಡೀ ಸೇನಾ ಮಹಿಳಾದಳವನ್ನು ವೀರಗಲ್ಲಿನ ಕೆಳಭಾಗದಲ್ಲಿ ಕೈಮುಗಿದು ಕುಳಿತು ಲಿಂಗ ಪೂಜೆಯಲ್ಲಿ ನಿರತಳಾಗಿರುವ ಮಹಿಳೆಯನ್ನು ಕಾಣಬಹುದು ಮತ್ತು ಮಹಿಳೆಯು ಶತ್ರುಗಳೊಂದಿಗೆ ಕಾದು ಮರಣ ಹೊಂದಿರುವುದನ್ನು ಗುರುತಿಸಬಹುದು. ವಿಜಯನಗರ ಸಮರದಲ್ಲಿ ಅನೇಕ ಮಹಿಳೆಯರು ಸಹ ಯುದ್ದಕ್ಕೆ ಪಾಲ್ಗೊಂಡು ವೀರ ಮಹಿಳಾರಾದರು.

**ಆನೆಗಳ ತರಬೇತಿ**

ವಿಜಯನಗರ ಅವಧಿಯಲ್ಲಿ ಆನೆಗಳನ್ನು ಹಿಡಿಯುವ ವಿಧಾನ ಹಾಗೂ ಅವುಗಳಲ್ಲಿ ಫಳಗಿಸುತ್ತಿದ್ದ ಬಗೆಯನ್ನು ರಜಾಕ್ ಮತ್ತು ನಿಕೋಲೊಕೊಂತಿ ಸವಿವರವಾಗಿ ತಮ್ಮ ದಿನಚರಿಯಲ್ಲಿ ಹೇಳಿದ್ದಾನೆ. ಆ ಕಾಲದ ರಾಜರು ಆನೆಯ ಬೇಟೆಗೆ ಹೋಗುತ್ತಿದ್ದರೆನ್ನುವ ರಜಾಕರ ಮಾತಿಗೆ ಇಮ್ಮಡಿ ದೇವರಾಯನು ಹೊಂದಿದ್ದ ಗಜಾಬೇಟೆಕಾರನೆಂಬ ಬಿರುದು ಸಮರ್ಥನೀಯವಾಗಿ ಕಾಣುವುದು.

**ಯುದ್ಧಸಿದ್ಧತೆ**

“ಗಜದಳವು ವಿಸ್ತಾರ ಸೈನ್ಯದಲ್ಲಿನ ಸಾಗರದಲ್ಲಿನ ನೌಕಾಪಡೆಯ ಹಾಗೆ ಚಲಿಸುತ್ತಿತ್ತೆಂದು ಒಂದೆಡೆಯಾಗಿ ವರ್ಣಿಸಲಾಗಿದೆ.”[೭೨] ಇಲ್ಲಿ ಆನೆಗಳನ್ನು ಯುದ್ದಗಳಿಗೆ ಸಜ್ಜುಗೊಳಿಸುತ್ತಿದ್ದ ನೀತಿಯನ್ನು “ನಿಕಟನ್” ಮನಮೋಹಕವಾಗಿ ಚಿತ್ರಿಸಿದ್ದಾನೆ. ಯುದ್ದಗಳಲ್ಲಿ ಆನೆಗಳನ್ನು ಹೆಚ್ಚಾಗಿ ಉಪಯೋಗಿಸುತ್ತಾರೆ. ಆನೆಗಳಿಗೆ ಅಲಂಕರಿಸಿದ್ದ ಉಕ್ಕಿನ ತಗಡುಗಳನ್ನು ಹೊದಿಸಿ ಅವುಗಳ ಸೊಂಡಿಲು ಮತ್ತು ಕೊರೆಗಳಿಗೆ ಮಾಡ. ಕೊಲ್ಕತ್ತಾಗಳನ್ನು ಹೊದಿಸಿ, ಬೆನ್ನಿಗೆ ಅಂಬಾರಿಯನ್ನು ಬಿಗಿದು, ಅದರೊಳಗೆ ಬಂದೂಕುಗಳನ್ನು ಬಿಲ್ಲು ಬಾಣಗಳನ್ನು ಹಿಡಿದು ರಕ್ಷ ಕವಚಗಳನ್ನು ಧರಿಸಿದ ಹನ್ನೆರಡು ಜನರು ಇರುತ್ತಾರೆ. ಇದು ನಿಕಟನ್ ಹೇಳುವ ವಿವರವಾದರೆ. ಬಾರ್ಬೊಸಾ ಯುದ್ದಕ್ಕೆ ಹೋಗುವಾಗ ಆನೆಗಳ ಮೇಲೆ ಅಂಬಾರಿಗಳನ್ನು ಅವುಗಳ ಬಿಲ್ಲು ಬಾಣ ಮುಂತಾದ ಶಸ್ತ್ರಾಸ್ತ್ರ ಸುಸಜ್ಜಿರಾದ ಯೋಧರು ಕುಳಿತು ಯುದ್ದಮಾಡುತ್ತಾರೆಂದು ಹೇಳಲಾಗುವುದು.

ಯುದ್ದಕ್ಕೆ ಆನೆಗಳು ತಯಾರು ಮಾಡುತ್ತಾರೆ. ಯುದ್ದದಲ್ಲಿ ಅವುಗಳು ತಮ್ಮ ಕೊರೆದಾಡಿಗಳಿಂದ ಕುದುರೆಗಳನ್ನು, ಯೋಧರನ್ನು ತಿವಿದು ಕೊಂದು ರಣರಂಗದಿಂದ ಓಡಿಸುತ್ತವೆ. ಹೀಗೆ ಅನೇಕ ವಿಧಿವಿಧಾನಗಳನ್ನು ಯುದ್ದದಲ್ಲಿ ಅರಸರು ಅಲಂಕರಿಸಿದಾದ ಯುದ್ದಕ್ಕೆ ಸಿದ್ದತೆಯಾದ ಸಂಗತಿಯಾಗಿದೆ. ಆನೆಗಳ ಬಲ ಸಾಮ್ರಾಜ್ಯಕ್ಕೆ ಕಳ, ಇಂತಹ ಮನೋಮೋಹಕ ನೆಲೆಯನ್ನು ವಿಜಯನಗರದರಸರಲ್ಲಿ ನಿರಂತರದಿಂದ ದೃಶ್ಯವನ್ನು ನೋಡುವುದು ಸಾಧ್ಯವಾಗಿರುತ್ತದೆ. ಇಂತಹ ಬಲಿಷ್ಠತನದಿಂದ ಕೂಡಿದ ಪ್ರಾಣಿಗಳ ಬಲ, ಆಭರಣಗಳ ಬಲ, ಶಿಕ್ಷಣದ ನೀತಿಯಲ್ಲಿ ಎಲ್ಲಾ ರೀತಿಯ ವ್ಯವಸ್ಥೆಯಾದ ವಿಷಯವಾಗಿದೆ.

ಮಹಾನವಮಿದಿಬ್ಬದ ಶಿಲ್ಪಪಟ್ಟಿಕೆಗಳಲ್ಲಿ ಒಂಟೆಡಗಳ ಸಾಲನ್ನು ಚಿತ್ರಿಸಲಾಗಿದೆ. ಹೀಗೆ ವಿಜಯನಗರಕಾಲದ ಸೈನ್ಯ ವ್ಯವಸ್ಥೆಯಲ್ಲಿ ಬಹಳ ಸುಸಜ್ಜಿತವಾದ ನಾವಿನ್ಯತೆ, ಪರಿಣಿತಿಗಳಿಂದ ಕೂಡಿದ ಹಾಗೂ ಹೊಸಹೊಸ ತಂತ್ರಜ್ಞಾನದ ಬಳಕೆಯನ್ನು ಕಾಲ, ಪ್ರವೇಶ ಮತ್ತು ದೇಶಕ್ಕನುಗುಣವಾಗಿ ಬದಲಾಯಿಸಿ ಸುಧಾರಿಸಿಕೊಳ್ಳುತ್ತಾ ಮುನ್ನುಗ್ಗಿದ್ದುದನ್ನು ವಿಜಯನಗರ ಸಾಮ್ರಾಜ್ಯದ ಸಮರದಲ್ಲಿ ಕಾಣುವುದು.

## ೪.೭. ಪ್ರಾಣಿ–ಪಕ್ಷಿಗಳು

ಬಳ್ಳಾರಿ ಜಿಲ್ಲಾ ಹೊಸಪೇಟೆ ತಾಲೂಕಿನ ಹಂಪಿಯ ಪ್ರದೇಶದ ಪ್ರಾಗೈತಿಹಾಸದ ಕಾಲದ ಚಿತ್ರಗಳು ಮುಖ್ಯವಾಗಿ ಮನುಷ್ಯ, ಪ್ರಾಣಿ, ಪಕ್ಷಿಗಳಿಗೆ ಸಂಬಂಧಿಸಿದ ಒಂದೆರೆಡು ಕಡೆ ಬೇರೆಯ ವಿಷಯದ ಚಿತ್ರಗಳಿಗೂ ಸಹ ಇವೆ. ಮನುಷ್ಯ ಹಾಗೂ ಪ್ರಾಣಿ, ಪಕ್ಷಿಗಳ ಚಿತ್ರಗಳಲ್ಲಿ ಅವುಗಳ ರಚನೆ ಮತ್ತು ಭಗೀಯ ವಿಷಯದಿಂದ ವೈವೀಧ್ಯವಾಗಿದೆ. ಒಟ್ಟಾರೆ ಚಿತ್ರಗಳ ವಿಷಯ ವಿಧಗಳು ಮತ್ತು ಭಂಗಿಗಳು, ಮಂಡಲ ರೇಖಾ ಚಿತ್ರದ ವಿವರವನ್ನು ನಾವು ಕಾಣಬಹುದು.

### ಪ್ರಾಣಿ ಚಿತ್ರಗಳು

"ಪ್ರಾಣಿ ಚಿತ್ರಗಳಲ್ಲಿ ಗೂಳಿ, ಎತ್ತು, ಕಾಡುಕೋಣ, ಮತ್ತು ಚಿಗರೆ, ಜಿಂಕೆಗಳು ಆ ಕಾಲದ ಮಾನವನಿಗೆ ಬಲು ಪರಿಚಿತವಾದ ಚಿತ್ರವಸ್ತುಗಳಾಗಿವೆ."[೨೨] ಹಾಗಾಗಿ ಈ ಪ್ರಾಣಿಗಳು ಅಧಿಕವಾಗಿ ಕಾಣಿಸಿಕೊಂಡಿವೆ. ಮತ್ತು ಉಳಿದ ಪ್ರಾಣಿ ಪಕ್ಷಿಗಳು ಸಹ ವೀಕ್ಷಣೆಯನ್ನು ಮಾಡಲಾಗಿವೆ. ಇಲ್ಲಿನ ಪ್ರತಿಯೊಂದರ ಚಿತ್ರಗಳು ಜನಸಾಮಾನ್ಯರ ಸಮಾಜದ ಬಳಕೆಗೆ ಅತ್ಯವಶ್ಯಕವಾಗಿದೆ.

### ಆಕಳು

ಈ ಹಂತದಲ್ಲಿ ಗೂಳಿಗೂ ಮತ್ತು ಆಕಳುಗಳನ್ನು ಕೆಲವು ಸಲ ಗಮನಿಸಿದರೆ ಅವುಗಳ ಶೈಲಿಯಲ್ಲಿ ಒಂದೇ ರೀತಿಯಿರುವುದರಿಂದ ಗುರುತಿಸುವುದು ಕಷ್ಟ. ಶಿಶ್ನ ವಿರುವುದರಿಂದ ಅದು ಎತ್ತು ಆಗಿರಬಹುದು ಇಲ್ಲವೇ ಗೂಳಿಯೂ ಆಗಿರಬಹುದು ಅದೇ ರೀತಿ ಗುದ್ದುದ್ವಾರ ಅಲ್ಲದೇ ಕೆಚ್ಚಲು ಇಲ್ಲದ ದನದ ರೀತಿಯ ಚಿತ್ರಗಳಿವೆ.

ಅದನ್ನು ಏನೆಂದು ಗುರುತಿಸುವುದು ಕಷ್ಟ ಆದರೆ ಒಟ್ಟು ಚಿತ್ರಗಳ ಪರಿಶೀಲನೆಯಿಂದ ಬಲಿಷ್ಟವಾಗಿ ಗಾಂಭಿರ್ಯದಿಂದ ಕೂಡಿರುವ ಗುದ್ದುದ್ವಾರ, ಕೋಡು (ಚಿಕ್ಕ, ದೊಡ್ಡ) ಕೆಲವು ಸಲ ಶಿಶ್ನ ಹೊಂದಿದವನ್ನು ಸಹ ನಿರ್ಧರಿಸಬಹುದು. ಗುದ್ದುದ್ವಾರ ಶಿಶ್ನು ತೀರ ಸರಳವಾಗಿ ಗಾಂಭಿರ್ಯಕ್ಕೆ ಇಲ್ಲದವನ್ನು ಎತ್ತುಗಳೆಂದು ಹಾಗೂ ಗುದ್ದುದ್ವಾರ ಶಿಶ್ನು ಇಲ್ಲದ, ಕೆಚ್ಚಲು ಇರುವ, ಇಲ್ಲದಿರುವ ದನಗಳನ್ನು ಹಸುಗಳೆಂದು ಗುರುತಿಸಬಹುದು. ಹಂಪಿಯ ಪ್ರದೇಶದಲ್ಲಿ ಪ್ರಾಣಿ ದನದ ವಿಶ್ಲೇಷಣೆಯನ್ನು ಮಾಡಲಾಗಿದೆ. ಹಾಗೂ ಈ ಆಕಳು ಜನಸಾಮಾನ್ಯರ ಬದುಕಿಗೆ ಪಶುಪಾಲನೆಯಲ್ಲಿ ಆಶ್ರತೆಯಾದ ಚಿತ್ರ ಮತ್ತು ಧಾರ್ಮಿಕ ಆಚರಣೆಗಳಿಗೆ ಅವಶ್ಯಕವಾಗಿದೆ.

### ಗೂಳಿಚಿತ್ರಗಳ ನೆಲೆ

ಗೂಳಿ ಚಿತ್ರಗಳು ಮಧ್ಯಮ ಮತ್ತು ಚಿಕ್ಕ ಪ್ರಮಾಣದಲ್ಲಿವೆ. ಛಾಯರೂಪದವೇ ಅಧಿಕ. ಮುಖ್ಯವಾಗಿ ಈ ರೀತಿಯ ಚಿತ್ರಗಳು ಹಿರೇ ಬೆಣಕಲ್, ಚಿಕ್ಕ ಬೆಣಕಲ್, ಹಂಜನಳ್ಳಿ, ಮಲ್ಲಾಪುರ, ಹಂಪಿ, ಬಸವಪಟ್ಟ ಮತ್ತು ಕಮಲಾಪುರ ಕೊರೆದ ಕುಟ್ಟಿದ ಚಿತ್ರಗಳ ನೆಲೆಗಳನ್ನು ಕಾಣಬಹುದಾಗಿದೆ.

